32 Rare-b

ಶ್ರೀ

# ಹನುಮಾನ್ ಗೀತೆಗಳು

ಭಾಗ ೨

ಲೇಖಕ

ತಾ. ಶ್ರೀ. ನಾಗರಾಜರಾಯ



(ಹ)

8K1.6
NAG

ಪ್ರಕಾಶಕರು

ಹನುಮಾನ್ ಸಂಘ

01, ಬಾಪು ಸುಬ್ಬರಾವ್ ರಸ್ತೆ

ಶ್ರೀರಾಮಪೇಟೆ

ಮೈಸೂರು-೧.

ಶ್ರೀ

# ಹನುಮಾನ್ ಗೀತೆಗಳು

ಭಾಗ ೨


ಲೇಖಕ

ಶಾ. ಶ್ರೀ ನಾಗರಾಜರಾಯ




AKSHARA GRANTHALAYA
ACC.NO. 111298



ಪ್ರಕಾಶಕರು

ಶ್ರೀ ಹನುಮಾನ್ ಸಂಘ

1501, ಬಾಪು ಸುಬ್ಬರಾವ್ ರಸ್ತೆ

ಶ್ರೀರಾಮಪೇಟೆ

ಮೈಸೂರು-೧.

ಮಮತೆ ವಾತ್ಸಲ್ಯಗಳ ನಿಧಿ । ಎನ್ನ ಜನನಿಯ ಚರಣ
ಕಮಲಗಳಿಗೆರಗಿ | ಜ್ಞಾನಮೂರುತಿಯಾದ ತಂದೆಗೆ
ನಮಿಸಿ । ಗುರುವರ್ಯ ಕೇತ್‌ಕರರ ಸ್ಮರಣೆ ಗೈಯುತ ನಾನು । ಪ
ರಮ ತಾಳ್ಯದ ಹನುಮಾ, ನಲಿಯೋ ಈ ಗೀತೆಗಳಲಿ । ಪ
ರಮ ಜ್ಞಾನಶಕ್ತಿಯ ನೀಡು । ಅಚಲ ಭಕ್ತಿಯ ನೀಡು ।
ಒಮ್ಮನದಿ ಹಾಡುವವರ ಸಲಹು ಸಲಹೆಂದು ಮೊರೆವೆ ॥

ಹಕ್ಕುಗಳು ಲೇಖಕನದು

(R) 111298

ಬೆಲೆ ೬೦ ಪೈಸೇ

8K1·6
NAG h

ಮುದ್ರಕರು :
ಚೇತನ ಮುದ್ರಾಲಯ
ಕೆ. ಆರ್. ಆಸ್ಪತ್ರೆ ರಸ್ತೆ, ಮೈಸೂರು.

ಮುಖ ಚಿತ್ರ
ಶ್ರೀ ತಾಳ್ಯದ ಹನುಮನ ದೇವಸ್ಥಾನದ ಒಂದು ಹೊರನೋಟ

ಗೊಂಕೇಕರ್ ಜಯನೆ

## ಗೀತೆಗಳನ್ನು ಹಾಡುವ ಮುನ್ನ--

ಈಗ್ಗೆ ಆರುವರ್ಷಗಳ ಹಿಂದೆ ಶ್ರೀ ಹನುಮಾನ್ ಗೀತೆಗಳ ಮೊದಲ ಭಾಗ ಪ್ರಕಟವಾಗಿತ್ತು. ಅದಕ್ಕೆ ಜನತೆಯಿಂದ ಮನ್ನಣೆ, ಮೆಚ್ಚಿಗೆ ಯಥೇಚ್ಛವಾಗಿ ದೊರಕಿತು. ಆ ಹಾಡುಗಳು ಅನೇಕ ಭಜನ ಮಂದಿರಗಳು, ಶಾಲೆಗಳು, ಸಂಘ ಸಂಸ್ಥೆಗಳು, ಆಕಾಶವಾಣಿ ಮೊದಲಾದ ಕಡೆ ಹಾಡಲ್ಪಟ್ಟು ಜನಪ್ರಿಯತೆಯನ್ನು ಪಡೆದವು.

ಶ್ರೀ ಹನುಮಾನ್ ದೇವ ಭಕ್ತಿ ಭಂಢಾರಿ, ಶ್ರೀರಾಮನ ಪೂಜಾರಿ, ಸೇವೆಯ ಐಸಿರಿ, ಸಂಗೀತದ ಸಿರಿ ; ಅವನ ನಾಮ ಸ್ಮರಣೆಯೇ ಒಂದು ಪುಣ್ಯ ; ಅವನ ಪವಿತ್ರ ಮಹಿಮೆಗಳ ನೆನಪೇ ಒಂದು ಮಹತ್ಕಾರ್ಯ ; ಅವನನ್ನು ಸ್ಮರಿಸಿ ಪೂಜಿಸಿ, ಹಾಡಿ, ಪಾಡಿದವರೇ ಧನ್ಯ. ಆ ದಿವ್ಯಮೂರ್ತಿಯನ್ನು ಕನಸಿನಲ್ಲಿ ಕಂಡಾಗ, ಮಂದಿರಗಳಲ್ಲಿ ನೋಡಿದಾಗ, ಭಾವಚಿತ್ರಗಳಲ್ಲಿ ಗಮನಿಸಿದಾಗ, ಹಾಗೂ ಅವನನ್ನು ಮನಸ್ಸಿನ ಪರದೆಯಮೇಲೆ ಚಿತ್ರಿಸಿಕೊಂಡಾಗ ಉಂಟಾದ ಭಾವನೆಗಳನ್ನು ಈ ಗೀತೆಗಳಲ್ಲಿ ತುಂಬಲು ಯತ್ನಿಸಿದ್ದೇನೆ. ಈ ಗೀತೆಗಳನ್ನು ಜನರು ಭಕ್ತಿಯಿಂದ ಹಾಡಿ ತಣಿದರೆ ನಾನು ಧನ್ಯ.

ಈ ಗೀತೆಗಳಲ್ಲಿ ಬಹುವಾಗಿ ಚಲನಚಿತ್ರ ಗೀತೆಗಳ ರಾಗಗಳನ್ನು ಅಳವಡಿಸ ಲಾಗಿದೆ. ಅದಕ್ಕೆ ಕಾರಣ, ಮೂಲ ಹಾಡುಗಳ ಸರಳತೆ ಹಾಗೂ ಜನಪ್ರಿಯತೆ. ಸಂಗೀತದ ಅಭ್ಯಾಸ ಮಾಡಿದವರೂ, ಮಾಡದವರೂ ಈ ಗೀತೆಗಳನು ಹಾಡಿ ನಾಮಸ್ಮರಣೆಯ ಅಮೃತಪಾನ ಮಾಡಲೆಂಬುದೇ ಉದ್ದೇಶ. ಬಳಸಿಕೊಂಡಿ ರುವ ಚಿತ್ರಗೀತೆಗಳನ್ನು ರಚಿಸಿದವರಿಗೂ, ರಾಗ ಸಂಯೋಜಕರಿಗೂ, ಹಾಗೂ ಹಾಡಿದವರಿಗೂ ನಾನು ಕೃತಜ್ಞನಾಗಿದ್ದೇನೆ. ಈ ಗೀತೆಗಳನ್ನು ಸೂಚಿಸಲ್ಪಟ್ಟಿ ರುವ ರಾಗಗಳಲ್ಲಿಯೇ ಹಾಡಬೇಕೆಂದು ನಿಯಮವಿಲ್ಲ. ಹಾಡುವವರು ತಮಗೆ ಇಷ್ಟಬಂದ ಯಾವ ರಾಗದಲ್ಲಾದರೂ ಹಾಡಬಹುದು.

ಈ ಹಾಡುಗಳೆಲ್ಲಾ ನನ್ನ ಗ್ರಾಮ ದೇವರಾದ " ತಾಳ್ಯದ ಹನುಮ " ನ ಅಂಕಿತದಲ್ಲಿವೆ. ಚಿತ್ರದುರ್ಗಜಿಲ್ಲೆಯ ಹೊಳಲ್ಕೆರೆತಾಲ್ಲೂಕಿನಲ್ಲಿ ತಾಳ್ಯವೆಂಬ ಗ್ರಾಮ ಇದೆ. ಇದು ಚಿತ್ರದುರ್ಗ – ಹೊಸದುರ್ಗ (ಶಿವಗಂಗೆ ಮಾರ್ಗ) ದಾರಿಯಲ್ಲಿದೆ. ಅಲ್ಲಿ ಭಗವಾನ್ ಮಾರುತಿಯು ಅಜಾನುಬಾಹುವಾಗಿ ನೆಲಸಿ ಭಕ್ತರನ್ನು ಸಲಹು ತ್ತಿದ್ದಾನೆ. ಅಲ್ಲಿ ಪ್ರತಿವರ್ಷ ಚೈತ್ರಮಾಸದಲ್ಲಿ ಅವನ ರಥೋತ್ಸವ ವೈಭವವಾಗಿ ನಡೆಯುತ್ತದೆ. ಆ ಸಂದರ್ಭದಲ್ಲಿ ಅಲ್ಲಿ ಸಾಂಪ್ರದಾಯಿಕವಾಗಿ ತೇಜಿ ಪಲ್ಲಕ್ಕಿ

ಉತ್ಸವ, ದೊಡ್ಡೆಡೆ ಸೇವೆ, ಸೀಗೆ ತುಳಿಯುವುದು, ರಥೋತ್ಸವ (ಪುಟ 6 ಹಾಡು 12) ನಡೆಯುತ್ತದೆ. ಈ ಒಂದೊಂದು ಸೇವೆಯ ಹಿನ್ನೆಲೆಯಲ್ಲೂ ಒಂದೊಂದು ಮಹತ್ತರ ಕತೆಯಿದೆ.

ಕೆಲವು ಹಾಡುಗಳು ಶ್ರೀ ಬ್ರಹ್ಮಚೈತನ್ಯರನ್ನು ಕುರಿತಾಗಿವೆ. ಶ್ರೀ ಬ್ರಹ್ಮ ಚೈತನ್ಯ ಮಹಾರಾಜರು ಮಾರುತಿ ಅವತಾರವಾಗಿದ್ದು ಶ್ರೀರಾಮನಾಮವನ್ನು ಸಾರಿ ಪಾಮರರ ಉದ್ಧಾರ ಗೈದವರು. ಇವರ ಮಂದಿರ ಮಹಾರಾಷ್ಟ್ರದ ಸಾತಾರ ಜಿಲ್ಲೆಯ ಗೊಂದಾವಲೀ ಗ್ರಾಮದಲ್ಲಿದೆ, ಅಲ್ಲದೆ ಬೆಂಗಳೂರು (ಪುಟ 30-31, ಹಾಡು 63, 64, 65), ಮೈಸೂರು ಹಾಗೂ ಚಿಂತಾಮಣಿ ಮೊದಲಾದ ಕಡೆಗಳಲ್ಲಿ ಕಂಗೊಳಿಸುತ್ತಿವೆ.

ಈ ಗೀತೆಗಳು ಪ್ರಕಾಶ ಗೊಳ್ಳಲು ಮುಖ್ಯ ಕಾರಣರಾದವರು, ಮೈಸೂರು ಅರಮನೆಯ ಜನಾನಾ ಸಮ್ಮುಖದಲ್ಲಿ ಮೊಖ್ತೇಸರರಾಗಿರುವ ನನ್ನ ಚಿಕ್ಕಪ್ಪ ಶ್ರೀ ಎಸ್. ನಾರಾಯಣರಾವ್ ಹಾಗೂ ಅವರ ಧರ್ಮಪತ್ನಿ ಶ್ರೀಮತಿ ಸೀತಮ್ಮ ನವರು. ಅಲ್ಲದೆ ಸೋದರ ಟಿ. ಎಸ್. ಕೃಷ್ಣರಾವ್, ಸೋದರಿಯರಾದ ಶ್ರೀಮತಿ ಸಂಜೀವಮ್ಮಶ್ರೀನಿವಾಸಮೂರ್ತಿ, ಕಮಲಾಪಾಂಡುರಂಗರಾವ್, ಗೆಳೆಯರಾದ ಸರ್ವಶ್ರೀ ಕೆ. ಎಸ್. ಅನಂತರಾಮನ್, ಟಿ. ಆರ್. ಶ್ರೀನಿವಾಸಮೂರ್ತಿ, ಎನ್. ಸಿ. ಶ್ರೀನಾಥನ್, ಸಿ. ನಾರಾಯಣಯ್ಯ ಮೊದಲಾದವರು ವಿವಿಧ ರೀತಿಯಲ್ಲಿ ಈ ಪವಿತ್ರ ಕೆಲಸದಲ್ಲಿ ನೆರವಾಗಿದ್ದಾರೆ-

ಶ್ರೀ ಹನುಮಾನ್ ಸಂಘದ ಆಧ್ಯಕ್ಷರಾದ ಶ್ರೀ ಪಿ. ವಿ. ಗೋಪಾಲ್‌ರಾವ್, ಉಪಾಧ್ಯಕ್ಷರಾದ ಡಾ. ಬಿ. ಜಿ. ದಾಸ್, ಕಾರ್ಯದರ್ಶಿ, ಎಸ್. ನಾಗರಾಜರಾವ್ ಮತ್ತು ಸಂಸ್ಥಾಪಕ ಶ್ರೀ ಹೆಚ್ ಎಸ್. ಪುರುಶೋತ್ತಮ ಅವರೂ ಈ ಹೊತ್ತಿಗೆಯ ಪ್ರಕಾಶನದಲ್ಲಿ ನೆರವಾಗಿದ್ದಾರೆ. ಶ್ರೀ ಚೇತನಾ ಮುದ್ರಾಲಯದವರು ಈ ಪುಸ್ತಕ ವನ್ನು ಸುಂದರವಾಗಿ, ಶೀಘ್ರದಲ್ಲಿ ಮುದ್ರಿಸಿ ಕೊಟ್ಟಿದ್ದಾರೆ. ವೆಸ್ಲಿ ಪ್ರೆಸ್‌ನವರು ಪಡಿಯಚ್ಚುಗಳನ್ನು ಸಕಾಲದಲ್ಲಿ ತಯಾರಿಸಿಕೊಟ್ಟಿದ್ದಾರೆ.

ಈ ಎಲ್ಲರಿಗೂ ನನ್ನ ಅನಂತ ವಂದನೆಗಳನ್ನು ಸಲ್ಲಿಸಿ, ಶ್ರೀ ಮಾರುತಿ ಸಕಲ ಭಾಗ್ಯಗಳನ್ನೂ ಕರುಣಿಸಲೆಂದು ಪ್ರಾರ್ಥಿಸುತ್ತೇನೆ.

ಹಾಡಲೆಂದೇ ರಚಿಸಲ್ಪಟ್ಟಿರುವ ಈ ಗೀತೆಗಳನ್ನು ಭಕ್ತಾದಿಗಳು ಹಾಡಿ, ಓದಿ, ಶ್ರೀ ಹನುಮನ ಕೃಪೆಗೆ ಪಾತ್ರರಾಗಬೇಕೆಂದು ಬೇಡುತ್ತೇನೆ.

268. ಸೋನಾರ್ ಬೀದಿ
ಚಾಮರಾಜ ಮೊಹಲ್ಲಾ
ಮೈಸೂರು 1.

ಇಂತು,
ತಾ. ಶ್ರೀ. ನಾಗರಾಜರಾಯ.

# ಅರ್ಪಣೆ



ದಿ|| ಟಿ ಎ. ಸುಬ್ಬರಾಯರು

ರೈಲ್ವೆ ಸ್ಟೇಷನ್ ಮಾಸ್ಟರ್ ಆಗಿ ಹಲವು ವರ್ಷಗಳ ಕಾಲ ಸೇವೆ ಸಲ್ಲಿಸಿ, ಜನಾನುರಾಗಿಗಳೂ, ದಾನ ಶೀಲರೂ, ಶ್ರೀರಾಮ ಭಕ್ತರೂ ಆಗಿದ್ದು, ಶ್ರೀಬ್ರಹ್ಮ ಚೈತನ್ಯ ಭಜನ ಮಂಡಲಿಯ ಅಧ್ಯಕ್ಷರಾಗಿದ್ದು ಮೈಸೂರಿನಲ್ಲಿ 1952 ರಲ್ಲಿ ಹದಿಮೂರು ಕೋಟಿ ರಾಮತಾರಕ ಜಪ ಯಜ್ಞ ನಡೆಯಲು ಮುಖ್ಯ ಕಾರಣ ರಾಗಿದ್ದು, ಶ್ರೀ ಸಮರ್ಥ ರಾಮದಾಸರ ಮನಾಚೀ ಶ್ಲೋಕಗಳನ್ನೂ, ಶ್ರೀ ಶಂಕರಾ ಚಾರ್ಯರ ವೇದಾಂತ ಸ್ತೋತ್ರಗಳನ್ನೂ ಕನ್ನಡಕ್ಕೆ ಪದ್ಯಾನುವಾದ ಮಾಡಿ ಕೀರ್ತಿ ಗಳಿಸಿ, ಮಹೋನ್ನತ ಜೀವನ ನಡೆಸಿ, 1965 ನೇ ಜನವರಿ 27 ರಂದು ಶ್ರೀರಾಮ ತಾರಕ ಮಂತ್ರವನ್ನು ಉಚ್ಚರಿಸುತ್ತ ಶ್ರೇಷ್ಠ ಮರಣವನ್ನಪ್ಪಿದಂಥ, ನನ್ನ ದೊಡ್ಡಪ್ಪ ದಿ|| ಟಿ. ಎ. ಸುಬ್ಬರಾಯರಿಗೆ ಈ ಕೃತಿಯನ್ನು ಭಕ್ತಿಪೂರ್ವಕ ವಾಗಿ ಅರ್ಪಿಸಿದ್ದೇನೆ.

ತಾ ಶ್ರೀ. ನಾಗರಾಜರಾಯ

# ೧. ಗಣಪತಿ ಸ್ತುತಿ

" ರಾಗ ಮೋಹನ " " ಸರಸ್ವತಿ ಮಾತೆ ಸುರನರವಿನುತೆ "—ಎಂಬಂತೆ

ಗಣಪತಿ ದೇವಾ | ನಮಿಸುವೆ ಮುದದಿ |
ಎಣಿಸದೆ ತಪ್ಪನು | ನಿರುತವು ಪೊರೆಯೋ || ಪ ||
ಪಾರ್ವತಿ ಕುವರಾ | ಪಾಶಾಂಕುಶಧರಾ |
ಪಾವನ ರೂಪಾ | ಪಾಪವಿನಾಶಾ ||
ಪರಿ ಪರಿ | ನುತಿಪೆನಾ | ಪಶುಪತಿಕುವರಾ || ೧ ||
ಮೋದಕ ಪ್ರಿಯನೇ | ಬಾಧಕ ಹರನೇ |
ಮೋದದಿ ನಿನ್ನಾ | ಪಾದವಪಿಡಿವೇ ||
ನಮಿಸುವೆ | ಭಜಿಸುವೆ | ಕರುಣಿಸುದೇವಾ || ೨ ||
ತಾರಕನಾಮಾ | ವರಪ್ರಿಯ ಸುಗುಣಾ |
ತಾಳ್ಯದ ಹನುಮಾ | ವಂದಿತ ಚರಣಾ ||
ತವಪದ| ಪಿಡಿವೆನಾ | ತ್ವರಿತದಿ ಬಾರೈ || ೩ ||

# ೨. ಸರಸ್ವತಿ ಸ್ತುತಿ

ರಾಗ " ಸೌರಾಷ್ಟ್ರ " ತಾಳ " ಛಾಪು " " ತಾರಕ್ಕ ಬಿಂದಿಗೆ " ಎಂಬಂತೆ

ವಂದೀಪೆ ವಾಣಿಯೆ ಹೇ ತಾಯೆ ಪೊರೆಯೋ | ತಾಯೋ ಶಾರದೆಯೋ |
ಚಂದೀರವದನೇ, ಬಂಧನ ಹರಿಸೀ | ಕಾಯೋ ಶಾರದೆಯೋ || ಪ ||
ವಿದ್ಯಾ ಬುದ್ಧಿಯ ಇತ್ತುನಿ ಸಲಹೈ | ತಾಯೋ ಶಾರದೆಯೆ |
ಸಿದ್ಧ ಸ್ವರೂಪಿಣಿ ಬದ್ಧಾನು ರಾಗದಿ | ಕಾಯೋ ಶಾರದೆಯೋ || ೧ ||
ವೀಣಾವರಶುಕಪಾಣಿ ದೇವೀ | ತಾಯೋ ಶಾರದೆಯೋ |
ವಾಣೀ ಮಣಿಕುಲ ವೇಣೀ ದೇವಿ | ಕಾಯೋ ಶಾರದೆಯೋ || ೨ ||
ಸನ್ಮತಿ ದಾತೇ, ಪಾವನರೂಪೇ | ತಾಯೋ ಶಾರದೆಯೋ |
ಚಿನ್ಮಯ ತಾಳ್ಯದ ಹನುಮನ ಜನನಿ | ಕಾಯೋ ಶಾರದೆಯೋ || ೩ ||

# ೩. ಸದ್ಗುರು ಸ್ತುತಿ

ರಾಗ " ಹಿಂದೋಳ " " ಭಜರೇ ಹನುಮಂತ " ಎಂಬಂತೆ

ಭಜರೇ ಗುರುದೇವಂ | ಹೇಮಾನಸ | ಭಜರೇ ಗುರುದೇವಂ || ಪ ||
ಭಜ ಹನುಮಂತಂ | ಬಹು ಬಲವಂತಂ |
ಭವ ಭಯ ನಾಶಕ | ಜಯ ಬಲಭೀಮಂ || ಅ. ಪ ||

ರಾವುಜಿ ಕುವರಂ | ಬ್ರಹ್ಮ ಚೈತನ್ಯಂ |
ಭಾವುಕ ಗಣ್ಯಂ | ಬ್ರಹ್ಮ ಸ್ವರೂಪಂ || ೧ ||
ಬ್ರಹ್ಮಾನಂದಂ | ಬೆಳಧಡಿ ವಾಸಂ |
ಬ್ರಹ್ಮಾಚರ್ಯಾಕೃತ | ಬಲಗುಣ ಧಾಮಂ || ೨ ||
ತಾರಕಯಾಗಂ | ಕೃತವರ ದೇವಂ |
ನಾರಣಪ್ಪಾಗುರು | ಕುಂದ ಗೋಳ್ ವಾಸಂ || ೩ ||
ಅವನಿಜೆ ದೂತಂ | ತ್ರಯಗುಣದೂರಂ |
ಅವತಾರಾಕೃತ | ತಾಳ್ಯದ ಹನುಮಂ || ೪ ||

## ೪. ಮಾರುತಿ ಸ್ತುತಿ

" ಮರೆಯ ಬೇಡ ಮನವೆ ನೀನು ಹರಿಸ್ಮರಣೆಯ " ಎಂಬಂತೆ

ನಿರತ ಮಾಡು ಮನವೆ ನೀನು | ಹನುಮಧ್ಯಾನವಾ || ಪ ||
ಸೂರ್ಯನನ್ನು ಹಿಡಿಯೆ ತಾನು | ವಾಯುವೇಗದಲ್ಲಿ ಹಾರಿ |
ದಿವ್ಯಶಕುತಿ ತೋರಿ ಮೆರೆದಾ | ಭವ್ಯ ಪ್ರಭುವ ಪೂಜಿಸೊ || ೧ ||
ಬ್ರಹ್ಮ ಚಾರಿ ಶಾಂತಪರನ | ಕರ್ಮಯೋಗಿ ಭಕ್ತವರನ |
ಜನ್ಮ ಮರಣ ನೀಗಿ ಪೊರೆವ | ಧರ್ಮದೇವನ ಧ್ಯಾನಿಸೂ || ೨ ||
ತಾಳ್ಯದನುಮ ಸ್ಮರಣೆಯಿಂದ | ರೋಗ ರುಜಿನವೆಲ್ಲ ನಾಶ |
ತ್ಯಾಗ ಮೂರ್ತಿ ಅವನ ನೆನೆದು | ಭಾಗ್ಯವಂತ ನಾಗುನೀ || ೩ ||

## ೫. ಕನ್ನಡತಾಯ ಸ್ತುತಿ

ವಂದೇ ತಾಯಿ ವಂದೇ ತಾಯಿ | ವಂದೆ ಕನ್ನಡ ಜನನಿಯೇ || ಪ ||

ಎನ್ನಾ ಮನದೀ | ಹೊನ್ನೂ ನುಡಿಯಾ |
ಸನ್ನುತ ದೇವಿ ನೀನಲಿಸೆ | ಸನ್ನುತಲಿ ದೇವಿ ನೀನಲಿಸೇ || ೧ ||
ಹೊನ್ನೂನುಡಿಯಾ | ಕನ್ನಡದಲ್ಲೀ |
ಹನೂಮನ ಹಾ ಡಾ ಬರೆವೇನಾ | ಹನುಮಾನ ಹಾಡ ಬರೆವೆನಾ ||೨||
ಬರೆದಾ ಹಾಡೂ | ಮೆರೆದೂ ನಲಿವಾ |
ವರವನ್ನು ನೀಡೂ ಹೇ ತಾಯೇ | ವರವನ್ನು ನೀಡು ಹೇ ತಾಯೆ || ೩
ತಾಳ್ಯಾದ್ಹನುಮಾ | ಜನನೀ ನಿನ್ನಾ |
ಕೇಳೂವುದಿಷ್ಟೇ ನಾನಮ್ಮ | ಕೇಳುವೂದಿಷ್ಟೇ ನಾನಮ್ಮ || ೪ ||

## ೬. ಶಂಕರ ಸ್ತುತಿ

"ಉಗಾದಿ ಬರುತಿದೆ ಓ ಗೆಳತಿ"—ಎಂಬಂತೆ

ನಮಾಮಿ ಶಂಕರ ಓ ಪ್ರಭುವೇ |
ಅಭಯಂಕರ ಪರಶಿವ ವಿಭುವೇ || ಪ ||
ಗಂಗಾಧರವರ | ಸಂಗಮಹೇಶ್ವರ |
ಮಂಗಳಕರಗುರು | ಕಂಗಳ ತೆರೆಯಯ್ಯಾ ||ಅ. ಪ ||

ಪ್ರಣವಾಕಾರ | ಪ್ರಾಣಾಧಾರ | ಪರನೇಕರಿಸೂ ಜನನಮರಣದೂರಾ |
ಪ್ರಭುವೇ ನಿನ್ನ ಮಹಿಮೆ ಅಪಾರ:|
ಪರಶಿವ ಪಂಚಮ ಬ್ರಹ್ಮ ಶರೀರಾ || ೧ ||

ಚಂದ್ರಾ ಅಗ್ನಿ ರವಿ ನೇತ್ರಾ | ಇಂದ್ರಾಸುರನುತವರಗಾತ್ರಾ |
ವಂದೇ ಶಂಭೂ ಪರಮೇಶಾ | ಸುಂದರ ಪಾವನ ಫಣಿಭೂಷಾ || ೨ ||

ಭಸಿತಾ ಪರಮ ಅಂಗವಿಭೂಷಾ | ಮುರಹರಮದನಾ ಗರ್ವವಿನಾಶಾ |
ರಸಿಕಾ ನಾಟಕ ನಾಟ್ಯವಿಶೇಷ | ವರಗುರು ತಾಳ್ಯದ ಹನುಮೇಶಾ || ೩ ||

## ೭. ಶ್ರೀರಾಮ ಸ್ತುತಿ

ರಾಗ "ವಿಜಯನಾಗರಿ", ತಾಳ "ಆದಿ"

"ವಿಜಯಾಂಬಿಕೇ, ವಿಮಲಾತ್ಮಿಕೇ"—ಎಂಬಂತೆ.

ರಘುರಾಮನೇ | ಗುಣಸಾಂದ್ರನೇ || ಪ ||
ಖಗಪಾಲಿತಾ | ಮೃಗಧಾರಿನುತ |
ಖಗರಾಜಹಿತ | ಸುಖಶಾಂತಿದಾತಾ || ಅ. ಪ ||
ದಾಸದಸ, ಧರಿಸದಸ, ದದಪಮಪಾ, ಪಮಗರಿ
ಗಮ-ಸದಪಮಗಮ ದದಪಾ, ಧದಸಾ, ರಿರಿಗಾ
ಸಸರಿ, ಮಮಗಗರಿರಿಸಸ ದಪಮ ಗಮಪಾ ||

**ಚರಣ** ಜ್ಞಾನವನ್ನು ನೀನೂ | ಜಾನಕೀಶ ನೀಡು |
ಧ್ಯಾನಮಾಳ್ಪೆ ನಿನ್ನಾ | ಅನುದಿನವು ನಾ ||
ಮೌನ ನೀಗು ನೀ | ಬಾರೈ .... |
ಮೌನ ನೀಗು ನೀ | ಮೊರೆಯಾಲಿಸೈ |
ಮಾನ್ಯ ತಾಳ್ಯೆದ್ಧನುಮಾ | ಪ್ರಭೂ ಬಾರೆಲೈ ||

## ೮. ಗುರು ಬ್ರಹ್ಮಾನಂದರ ಸ್ತುತಿ

ರಾಗ " ಮೋಹನ "  " ಎಲ್ಲಿಯು ನೀನಿಹೆ ಗೊಲ್ಲರ ಪೋರಾ " ಧಾಟಿ

ಸದ್ಗುರು ಸ್ವಾಮಿಯೆ ಬ್ರಹ್ಮಾನಂದಾ |
ವರಗುರು ಬ್ರಹ್ಮಚೈತನ್ಯರ ದಾಸಾ || ಪ ||
ಬ್ರಹ್ಮಸ್ವರೂಪೀ | ಬೆಳಧಡಿವಾಸೀ |
ಬ್ರಹ್ಮಚರ್ಯವಾ ನಡೆಸಿದ ಮೂರ್ತೀ ||
ಬ್ರಹ್ಮಾಂಡವನೇ ಬೆಳಗಿದ ಜ್ಯೋತೀ |
ಬ್ರಹ್ಮಾನಂದಗುರು ತೋರು ನಿ ಪ್ರೀತೀ || ೧ ||
ತಾರಕ ನಾಮಾ | ಸಾರಿದೆ ಜಗದೀ |
ಬೀರಿದೆ ಮಹಿಮೆಯ ಪ್ರೀತಿಯ ನೀನೂ ||
ವಾರಿಜ ನಾಭನಾ ಮಂದಿರ ಕಟ್ಟಿದ |
ಸಾರಸ ನೇತ್ರನೆ ಸ್ಮರಿಸುವೆ ನಿನ್ನಾ || ೨ ||
ವೆಂಕಟ ಪುರದಲಿ ನೆಲಸಿದ ದೇವಾ |
ವೆಂಕಟ ರಮಣನ ಸೇವೆಯ ಗೈದೇ ||
ಸಂಕಟ ಹಾರಕ ತಾಳ್ಯದ ಹನುಮನ |
ಕಿಂಕರ ನಿನ್ನನು ನಮಿಸುವೆ ಸತತಾ || ೩ ||

## ೯. ಗುರು ನಾರಾಣಪ್ಪರ ಸ್ತುತಿ

ರಾಗ " ಹಿಂದೂಸ್ತಾನಿ ಬೇಹಾಗ್ "

" ಕೃಷ್ಣಾ ನೀ ಬೇಗನೆ ಬಾರೋ " — ಎಂಬಂತೆ

ಗುರುವೇ ನೀ ಬೇಗನೆ ಬಾರೋ |
ಗುರುವರ ಬಾರೋ | ಕರುಣಾವ ತೋರೋ || ಪ ||
ಕುಂದ ಗೋಳಿನ ವಾಸಿ | ಕುಲಕರ್ಣಿ ವಂಶಿ |
ಕುಂದದ ಭೀಷ್ಟವ ನೀಡುವ ಯೋಗಿ || ೧ ||
ಪಂಡಿತ ಶ್ರೀಪ್ಟನ ಗರ್ವವ ನೀಗಿದೆ |
ಪಂಡಿತೋತ್ತಮ ಗುರು ನಾರಣಪ್ಪ || ೨ ||
ತೇರಾ ಕೋಟಿ ಜಪ ಯಾಗವ ನಡೆಸಿದೆ |
ವರಗುರುಬ್ರಹ್ಮ ಚೈತನ್ಯರ ದಾಸಾ || ೩ ||
ಅನ್ನವ ಅಕ್ಷಯ ಮಾಡಿದ ಪ್ರಭುವೇ |
ಸನ್ನುತ ತಾಳ್ಯದ ಹನುಮನ ಪ್ರಿಯನೇ || ೪ ||

## ೧೦. ಗುರುಬ್ರಹ್ಮ ಚೈತನ್ಯ ಸ್ತುತಿ

ರಾಗ " ಸೌರಾಷ್ಟ್ರ " ತಾಳ " ಛಾಪು "

" ನರಜನ್ಮ ಬಂದಾಗ ನಾಲಿಗೆ ಇರುವಾಗ ಕೃಷ್ಣಾ ಎನಬಾರದೇ " —ಎಂಬಂತೆ

ವರ ಬ್ರಹ್ಮ ಚೈತನ್ಯ ಚರಣಕ್ಕೆ ನೀ ಎರಗಿ ಗುರುವೆ ಎನು ಮಾನವಾ ।
ಗುರುವನ್ನು ನೆನೆದರೆ ಕಡುಪಾಪ ಪರಿಹಾರ, ಗುರುವಾ ನೆನೆ ಮಾನವಾ ॥ಪ॥
ಮಾನ ಗಂಗಾ ತೀರ ಗೊಂದಾವಲೀವಾಸೀ, ಗುರುವಾ ನೆನೆ ಮಾನವಾ ।
ರಾವೂಜಿ ಗೀತಾ ಪ್ರೀತಿಯ ಕುವರಾ, ಗುರುವಾ ನೆನೆ ಮಾನವಾ ॥ ೧ ॥
ತೊಟ್ಟೀಲ ಒಳಗೆ ರಾಮನ ಭಜಿಸಿದ ಗುರುವಾ ನೆನೆ ಮಾನವಾ ।
ಶ್ರೀತುಕಾರಾಮರ ಸೇವೆಯ ಮಾಡಿದ ಗುರುವಾ ನೆನೆ ಮಾನವಾ ॥ ೨ ॥
ಕಾಶೀಲಿ ಪ್ರೇತಕ್ಕೆ ಪ್ರಾಣಾವನಿತ್ತ, ಗುರುವಾ ನೆನೆ ಮಾನವಾ ।
ಬೇಜಾ ಬಡಿಸಿದ ಕೆಂಡವ ತಿಂದಂಥ, ಗುರುವಾ ನೆನೆ ಮಾನವಾ ॥ ೩ ॥
ಕಣ್ಣಿಲ್ಲದಂಥ ಯಮುನೆಯ ವರಿಸಿದ, ಗುರುವಾ ನೆನೆ ಮಾನವಾ ।
ಭಕ್ತಾರ ಕಣ್ಣಿಗೆ ಕಣ್ಣಾಗಿ ಮೆರೆದಂಥ, ಗುರುವಾ ನೆನೆ ಮಾನವಾ ॥ ೪ ॥
ಶ್ರೀರಾಮಮಂದಿರ ಕಟ್ಟೂತ ಮೆರೆದ, ಗುರುವಾ ನೆನೆ ಮಾನವಾ ।
ಶ್ರೀರಾಮನಾಮವ ಸಾರೂತ ಮೆರೆದಂಥ, ಗುರುವಾ ನೆನೆ ಮಾನವಾ ॥ ೫ ॥
ಪಂಡೀತಜನರ ಗರ್ವವ ನೀಗೀದ, ಗುರುವಾ ನೆನೆ ಮಾನವಾ ।
ಪಾಮಾರವೃಂದವ ಉದ್ಧಾರಮಾಡಿದ, ಗುರುವಾ ನೆನೆ ಮಾನವಾ ॥ ೬ ॥
ಪಾವಕ್ಕಿಯನ್ನು ಅಕ್ಷಯಮಾಡಿದ, ಗುರುವಾ ನೆನೆ ಮಾನವಾ ।
ಗೋವ್ಗಳ ಪಾಲಕ ಅಶ್ವದ ರಕ್ಷಕ, ಗುರುವಾ ನೆನೆ ಮಾನವಾ ॥ ೭ ॥
ತಾರಕಪ್ರೇಮಾ ; ಸಾಸೀರ ಮಹೀಮಾ, ಗುರುವಾ ನೆನೆ ಮಾನವಾ ।
ತಾಳ್ಯಾದ ಹನುಮಾನ ಅವತಾರಮೂರ್ತೀಯ, ಗುರುವಾ ನೆನೆ ಮಾನವಾ ॥ ೮ ॥

## ೧೧. ಮಾರುತಿ ಸ್ತುತಿ

" ದೇವಬಂದಾನಮ್ಮ "—ಎಂಬಂತೆ

ದೇವ ನಮೋ ಗುರು । ಪಾಲಿಸು ದೇವಾ ।
ಭಾವುಕ ಭಕ್ತ ಶಿರೋಮಣಿ ದೇವಾ ॥ ಪ ॥
ಶರಣು ಜನರ ಕಾವಾ । ಕರುಣಾ ಸಾಗರ ದೇವಾ ।
ಚರಣವ ಪಿಡಿದು ನಾ । ಪರಿಪರಿ ಬೇಡುವೇ ॥ ೧ ॥
ನಿನ್ನನು ನಂಬಿದ । ಆಶ್ರಿತ ಜನರಿಗೇ ।
ಚಿನ್ಮಯ ರೂಪನೇ । ಅನಂದ ನೀಹೋ ॥ ೨ ॥
ಹರಿಹರಸುರನುತ । ತಾಳ್ಯದ ಹನುಮಾ ।
ಪರಿಪರಿ ಮಹಿಮೆಯ ತೋರುತ್ತ ಬಾರೋ ॥ ೩ ॥

## ೧೨. ತಾಳ್ಯದ ಹನುಮನ ವೈಭವ

ರಾಗ " ಜಾನಪದ "

ಕುಣಿಯೋಣು ಬಾರಾ । ಕುಣಿಯೋಣು ಬಾ ।
ಥೈ ಥೈ ಥೈ ಥೈ ಧಿಮಿಧಿಮಿ ಎಂದೂ ॥ ಪ ॥
ತೇಜೀಯ ತಲೆಮೇಲೆ ಎತ್ತೀ ನಾವ್ ಕುಣಿಯೋಣ ॥
ಭುಜದಲ್ಲಿ ಪಲ್ಲಕ್ಕಿ ಹೊತ್ತೂ ನಾವ್ ಕುಣಿಯೋಣ ।
ಸೀಗೇಯ ತುಳಿದೂ ದೊಡ್ಡಡೆ ಮಾಡೀ ॥ ೧ ॥
ಬಾಣಪ್ಪದೇವನಿಗೆ ಶರಣಾಗಿ ಕುಣಿಯೋಣ ।
ಭೂತಪ್ಪ ಸಲಹೂ ಎಂದೂ ನಾವು ಕುಣಿಯೋಣ ॥
ಮುಳ್ಳೀನ ಹಾವುಗೆ ಮೆಟ್ಟೂತ ನಾವೂ ॥ ೨ ॥
ರಂಗಪ್ಪ ದೇವನಿಗೆ ನಮಿಸೀ ನಾವ್ ಕುಣಿಯೋಣ ।
ಗುಂಡೀನಸೇವೇ ಮಾಡೀ ನಾವ್ ಕುಣಿಯೋಣ ॥
ಬಂಡಮ್ಮ ತಾಯೀ ಹರಸೂ ಹರಸೆಂದೂ ॥ ೩ ॥
ಬೆಳ್ಳಿಯರಥವ ಎಳೆದೂ ನಾವ್ ಕುಣಿಯೋಣ ।
ಎಲ್ಲೆಲ್ಲು ಮಾರುತಿಯ ಕಂಡೂ ನಾವ್ ಕುಣಿಯೋಣ ॥
ದೀಪಾವ ಹಚ್ಚೀ ಧೂಪಾವ ಹಾಕೀ . . ॥ ೪ ॥
ಭಕ್ತರ ಸೇವೆಯ ಮಾಡೂತ ಕುಣಿಯೋಣ ।
ತಪ್ಪನ್ನು ಅರಿತು ಒಪ್ಪಾಗಿ ಕುಣಿಯೋಣ ॥
ತಾಳ್ಯಾದ ಹನುಮನ ರಥವನ್ನೇ ಎಳೆದೂ ॥ ೫ ॥

## ೧೩. " ಮಾಮವತುಶ್ರೀ "—ಎಂಬಂತೆ. ರಾಗ " ಹಿಂದೋಳ ", ತಾಳ ' ಆದಿ '

ವಾಯುಸುತ ಶ್ರೀ ಪರಾತ್ಪರಾ ।
ಕಾಯೊ ದೇವ ಪ್ರೇಮ ಸರೋವರಾ ॥ ಪ ॥
ಭೂಮಿಜೆನುತ ಸುಧೀರ ನಿಜವೀರಾ ।
ನಮೋ ಪ್ರಾಣೇಶ್ವರ ಜ್ಞಾನಭಾಸ್ಕರಾ ॥ ಅ. ಪ ॥
ಚರಣ ವೇದಾಂತವೇದ್ಯಾ ಭಾವುಕಾ ಪರಮಾ ।
ನಾದಾಂತ ಸದನ । ಮಹನೀಯ ಹನುಮಾ ॥
ಅಮರ ಗುಣಾನ್ವಿತ ಅಂಜನಿ ಕುವರ ।
ಅವನಿಜೆಪಾಲಿತ ಅನುಪಮ ವೀರ ॥
ಅರಿಪುರ ಸಂಹಾರ ತಾಳ್ಯದ್ಹನುಮ । ನಾಮಾ
ಮೃತ ಪರಮ ಜ್ಞಾನಸಾರಾ ॥

(ಸಿನೀಮಾ ಹಾಡುಗಳ ರಾಗಗಳು)

೧೪. " ಆಜಾರೇ ಪರದೇಶಿ " ಮಧುಮತಿ—ಎಂಬಂತೆ

ಓ ದೇವಾ........ಹನುಮಂತ |
ನಿನ್ನಾ ಸ್ಮರೀಸುತ ಬೇಡುವೆನಾ | ಮಾರುತಿಯೆ
ದರುಶನ ನೀಡುತ ಬಾ || ಪ ||

ನೀ ಎನ್ನ ಜನುಮ ಮರಣಗಳ ಕಳೆದೂ |
ನೀಗಿಸೂ ಎನ್ನಾ ಭವಭಯ ತಾಪಾ ||
ನೀಡುನೀ ಅಭಯುವ ಚಿನ್ಮಯ ರೂಪಾ || ಓ ಓ .... || ೧ ||

ಭಕ್ತಿಯ ಕುಸುಮದಿ ಪೂಜೆಯ ಮಾಡೀ |
ಜ್ಯೋತಿಸ್ವರೂಪದೀ ನಿನ್ನನು ನೋಡೀ ||
ಮತಿಯನು ಬೇಡುವೆ ಕರುಣಿಸು ನೀಡೀ || ಓ ಓ .... || ೨ ||

ಕಂದನ ಮೊರೆಯನು ಆಲಿಸುತ ತಂದೇ |
ಸುಂದರ ಪಾದವಾ ತೋರುನೀ ಇಂದೇ....||
ಚಂದಿರ ವದನನೇ ತಾಳ್ಯದ ಹುನುಮಾ || ಓ ಓ .... || ೩ ||

೧೫. " ಘಡೀ ಘಡೀ " ಮಧುಮತಿ—ಎಂಬಂತೆ

ನಮೋ ನಮೋ ಗುರು ವಿಶ್ವೇಶಾ | ಜೀವೇಶಾ | ಜ್ಞಾನೇಶ |
ಆಲಿಸು ಮೊರೆಯಾ ಪ್ರಾಣೇಶ | ಆಶ್ರಿತ ಎನ್ನಾ ಪೊರೆಯಯ್ಯಾ || ಪ ||

ಜೀವನ ನೌಕೆಯ ಅಂಬಿಗ ದೇವಾ | ದೀನೋದ್ಧಾರಿ ಬಾ |
ಸಾವಿನ ನೋವಿನ ಪಂಜಿರ ಹರಿವಾ |ದಾನವ ವೈರೀ ಬಾ....ರೈ....
ದಾನವ ವೈರೀ ಬಾ ||
ಸೇವೆಯ ಗೈವೇ ಅನವರತಾ | ವಿಶ್ವೇಶಾ | ಜ್ಞಾನೇಶ |
ಆಲಿಸು ಮೊರೆಯ ಪ್ರಾಣೇಶ | ಆಶ್ರಿತ ಎನ್ನಾ ಪೊರೆಯಯ್ಯಾ || ೧ ||

ಆಶಾಜೀವನ ಸುಗಮಯ ಗೈಯುತ | ಆಶ್ರಿತವತ್ಸಲ ಬಾ |
ಆಪದ್ಬಾಂಧವ ತಾಳ್ಯದ ಹನುಮಾ | ಆರ್ತತ್ರಾಣಪರಾ-ಯಣಾ |
ಆರ್ತತ್ರಾಣ ಪರಾ ||
ಆದರದಿಂದ ಪೂಜಿಸುವೇ | ವಿಶ್ವೇಶಾ | ಜ್ಞಾನೇಶ |
ಆಲಿಸು ಮೊರೆಯ ಪ್ರಾಣೇಶ | ಆಶ್ರಿತ ಎನ್ನ ಪೊರೆಯಯ್ಯ || ೨ ||

೧೭. " ಮುರ್ಝ ನಾ ಬುಲಾ " ಸುವರ್ಣ ಸುಂದರಿ — ಎಂಬಂತೆ

ಗುರುದೇವ ಬಾ । ಹನುಮಂತ ಬಾ ।
ಕರುಣಾವ ಬೀರುತ್ತ ಹನುಮಂತ ಬಾ ॥ ಪ ॥
ಭೂರಿ ಪಾಪಂಗಳ ಕೂಪದೊಳ್ ಸಿಲುಕಿ ।
ದಾರಿಯ ಕಾಣದೆ ಬಳಲುತ್ತ ಲಿರುವೇ ॥
ವಾರಿಜ ನೇತ್ರನೇ ಬಂದೆನ್ನ ಕಾಯೋ .... ।
ಜಯ ಜಯ ದೇವ । ಪ್ರಾಣನಾಥ । ಜ್ಞಾನದಾತಾ ॥ ೧ ॥
ಪಂಚ ಭೂತಂಗಳ ಭೀತಿಯ ಬಿಡಿಸೈ ।
ಸಂಚಿತ ಪಾಪದ ಬಾಧೆಯ ಹರಿಸೈ ॥
ಕಿಂಚಿತ್ತಾದರೂ ಭಕ್ತಿಯ ನೀಡೈ ।
ಜಯ ಜಯದೇವಾ । ಪ್ರಾಣನಾಥ । ಜ್ಞಾನದಾತಾ ॥ ೨ ॥
ನೆರೆಗಾಢಾಂಧವ ಹರೀಸುತ್ತ ಕಾಯೋ ।
ಪರಸುಖ ಪಥವನು ತೋರುತ್ತ ಪೊರೆಯೋ ॥
ವರಗುರು ತಾಳ್ಯದ ಹನುಮನೆ ಬಾರೋ .... ।
ಜಯ ಜಯ ದೇವಾ । ಪ್ರಾಣನಾಥ । ಜ್ಞಾನದಾತಾ ॥ ೩ ॥

೧೭. " ಆಡುವೋವೇ .... " (ವೀಟು) — ಎಂಬಂತೆ

ಆಂಜನೇಯಾ ಗುರು ಪ್ರಾಣದಾತಾ :
ಆನಂದ ನೀಡೋ ವರ ರಾಮ ದೂತ ॥ ಪ ॥
ಹಂಪೆಯಲಿ ಜನಿಸಿ । ಹರಭಕ್ತನೆಂದೆನಿಸೀ ।
ಹನುಮಂತ ನಾಮದಿಂದ ಶೋಭಿಸುತ್ತ ॥
ಹರ್ಷದಿ ಲೀಲೆಯ ತೋರುತ್ತ । ಪರಿ
ಹರಿಸಿದೆ ಭೂಮಿಯ ತಾಪವನ್ನೇ ॥ ೧ ॥
ಮಾನವ ರೂಪದಿ ಧರಣಿಗೆ ಬಂದಾ ।
ಜಾನಕಿ ಪತಿಯಾ ಸೇವೆ ಗೈದೇ ॥
ವಾನರ ಸೇನಾ ನಾಥನಾಗೀ .... । ನೀ
ದಾನವ ಕುಲವನ್ನು ನಾಶಗೈದೇ ॥ ೨ ॥
ಚಿರವರ ನಿರ್ಮಲ ಸೇವೆಯ ಗೈದೂ ।
ಪರ ತರ ಸಾಧನೆ ಜಯಿಸೀ ನಿಂದೇ ॥
ವರಗುರು ತಾಳ್ಯದ ಹನುಮಂತಾ । ನೀ
ಪರಿಹರಿಸೆನ್ನಯ ಭವ ಭಂಧಾ ॥ ೩ ॥

೧೮. " ಕುಹೂ ಕುಹೂ . . . " (ಸುವರ್ಣ ಸುಂದರಿ) ಎಂಬಂತೆ.

ನಮೋ ನಮೋ ದೇವಾ ಮಾರುತಿಯೇ . . |
ಪಾಹಿ ಪಾಹಿ ಎನ್ನ ಜ್ಞಾನೇಶ್ವರಾ | ಪ್ರಾಣೇಶ್ವರಾ || ಪ ||
ಚಿರ ವರಾ, ಪರಾ ಬ್ರಹ್ಮಚೈತನ್ಯ |
ಕರುಣಿಸೀ ದಯತೋರು ಅನನ್ಯ ||
ಗುರು ನೀಡು ಚರಣದ ಧೂಳಿಯ ನಿನ್ನ |
ಪಾಹಿ ಪಾಹಿ ಎನ್ನ ಜ್ಞಾನೇಶ್ವರಾ | ಪ್ರಾಣೇಶ್ವರಾ || ೧ ||
ಬಾರೋ . . . | ಬಾರೋ ಪ್ರಭೂ ಹೇ ದೀನಬಂಧೂ |
ತೋರು ನೀ ಕೃಪೆಯ || ಭೂರಿ ಪಾಪದಿ ಮುಳುಗಿಹೆ ನಾನು |
ದಾರಿ ತೋರಿ ಗುರು ಪಾಲಿಸು ಎನ್ನ |
ಪಾಹಿ ಪಾಹಿ ಎನ್ನ ಜ್ಞಾನೇಶ್ವರಾ | ಪ್ರಾಣೇಶ್ವರಾ || ೨ ||
ತಂದೆಯೂ, ತಾಯಿ ನೀನೇ | ಬಂಧೂ, ನೀ ಎನಗೇ |
ವಂದಿಸುವೆನು ನಾ ದೇವಾ | ಕಾಯೋ . . |
ತಂದೆಯೂ ತಾಯಿ ನೀನೇ . . |
ನೊಂದಿಹೆ ಗುರುವರ ಭವದಲಿ ಬೆಂದು ನಾ |
ಸುಂದರ ಮೂರುತಿ ಕರುಣಿಸು ದೇವಾ ||
ಪಾಹಿ ಪಾಹಿ ಎನ್ನ ಜ್ಞಾನೇಶ್ವರಾ | ಪ್ರಾಣೇಶ್ವರಾ || ೩ ||
ಸರಸಿಜಾಕ್ಷ ಗುರು ವಾತಾತ್ಮಜವರಾ |
ಚರಣ ಕಮಲ ಪಿಡಿದೇ . . . | ಸರಸಿಜಾಕ್ಷ ಗುರು ಬಾ . . . ||
ಶರಣು ತಾಳ್ಯದ್ಹನುಮಾ | ಕರುಣೆ ಶೌರ್ಯ ಧಾಮಾ |
ಚಿರ ಸೌಜನ್ಯ ಸಾಕಾರ ತೋರೋ || ೪ ||

೧೯. " ಭಾಮೆಯ ನೋಡಲು ತಾ ಬಂದ " (ಸ್ಕೂಲ್‌ಮಾಸ್ಟರ್)—ಎಂಬಂತೆ.

ಶ್ರೀಗುರುನಾಥನೆ ನೀ ಬಾರೊ |
ಗೊಂದಾವಲಿವಾಸಾ | ಮಹೇಶಾ || ಪ ||
ಸದ್ಬುದ್ಧಿಯನು ಇತ್ತು ನೀ ಮನ ತಣಿಸು |
ಸದ್ಗುರು ಸ್ವಾಮಿಯೆ ಬ್ರಹ್ಮಚೈತನ್ಯಾ || ೧ ||
ರಾವುಜಿ ವರಪುತ್ರ | ಭಾಗೀರಥಿಪ್ರಿಯ ||
ರಾಜೀವಾಕ್ಷನೇ ಗೋಧನಪ್ರಿಯವರಾ ||
ರಾಮನ ವರನಾಮ ಪಾಡುತ ಮೈಮರೆವ |
ರಾಜಿಪ ತಾಳ್ಯದ ಹನುಮಾ ಪರಾತ್ಪರಾ || ೨ ||

೨೦. " ಆಜ್ ಕಲ್ ಮೆಥಲ್‌ಗಯಾ " (ಬೇಟಿ ಬೇಟಿ)—ಎಂಬಂತೆ.

ಪ್ರಾಣದೇವ ಮಾರುತೀ । ವಂದಿಪೇ ಗುರೋ ।
ಜ್ಞಾನಾ ನೀಡೀ ಪಾಲಿಸೂ । ಬಂಧನಾ ಕಳೀ ‖ ಪ ‖
ಪಾಡುವೇ ಸುರಾವರಾ । ಬೇಡುವೇ ಗುರೂ ಗುರೂ ।
ನೀಡು ನೀ ಸದಾ ಜಯಾ । ಮಾಡು ನೀ ಶುಭೋದಯಾ ‖
ನೋಡು ದೇವ ಎನ್ನೆಡೇ । ದೂಡು ಮಾಯೆಯಾ ।
ನೀಡೀ ಜ್ಞಾನಾ ಪಾಲಿಸೂ । ಬಂಧನಾ ಕಳೇ . . . ‖ ೧ ‖
ಶ್ರೀಕರಾ ಶುಭಾಕರಾ । ಲೋಕಪೂಜ್ಯ ಸುಂದರಾ ।
ಏಕೆ ಮೌನ ಸ್ವಾಮಿಯೇ । ಸಾಕು ತಾಳಲಾರೆನೋ ‖
ಶೋಕ ದೂರಮಾಡುವಾ । ಶಂಕರಾಪ್ರಿಯಾ ।
ನೀಡೀ ಜ್ಞಾನಾ ಪಾಲಿಸೂ । ಬಂಧನಾ ಕಳೀ ‖ ೨ ‖
ಧ್ಯಾನಗೋಚರಾ ಗುರೂ । ವಾನರೇಶ ಮಾರುತೀ ।
ಜಾನಕೀಶ ದೂತನೇ । ಸಾನುರಾಗ ಕೀರುತೀ ‖
ಮಾನ್ಯ ತಾಳ್ಯಬ್ಬನುಮನೇ । ಮನ್ನಿಸೈ ಪ್ರಭೋ ।
ನೀಡೀ ಜ್ಞಾನಾ ಪಾಲಿಸೂ । ಬಂಧನಾ ಕಳೇ . . ‖ ೩ ‖

೨೧. " ನಾನು ಅಂಥಳಾದೆ " (ಸಾಕು ಮಗಳು)—ಎಂಬಂತೆ.

ಜ್ಞಾನದೀಪ ಸ್ವಾಮಿಾ । ಮೌನವೇಕೆ ದೇವಾ ।
ಮನದಲ್ಲಿ ನೀ ನೀಡು ಭಕ್ತಿಯ ಭಾವಾ । ಭಕ್ತಿಯ ಭಾವಾ ‖ ಪ ‖
ಎನ್ನಯ ಹೃದಯದಲಿ । ಚಿನ್ಮಯ ನೀನಿರಲು ।
ತನ್ಮಯ ಭಾವದೊಳೂ । ನಿನ್ನನು ಧ್ಯಾನಿಸುವೇ ‖
ಅನುಗಾಲವು ಗುರು ನಿನ್ನ । ಚರಣಧೂಳಿ ನೀಡು ।
ತನು ನಿನ್ನದು ಮನ ನಿನ್ನದು ಪರಮಪದವ ತೋರು ‖ ೧ ‖
ಬಂಧನವನು ಕಳೆವಾ । ಚಂದಿರಮುಖವರನೇ ।
ತಂದೆಯು ನೀ ಎನಗೇ । ಸುಂದರರೂಪ ಗುರೂ ‖
ಮದ ಮೋಹವ ನೀ ನೀಗಿ । ಮುದವ ತೋರು ತಂದೆ ।
ಹೃದಯೇಶನೆ ಪ್ರಾಣೇಶನೆ ವದನ ಕಮಲ ತೋರು . . . ‖ ೨ ‖
ರಾಮನ ಪಾದವನೂ । ನೇಮದಿ ಪೂಜಿಸುವಾ ।
ಪ್ರೇಮದ ಜ್ಯೋತಿಯು ನೀ ಕಾಮಿತದಾತ ಗುರೂ ‖
ಗುರು ತಾಳ್ಯದ ಹನುಮಂತ । ಭವದಿ ನಾನು ಬೆಂದೆ ।
ಸುರವಂದ್ಯನೆ ಜಗಮಾನ್ಯನೆ ದಾರಿ ತೋರು ಮುಂದೆ ‖ ೩ ‖

೨೨. " ಹಾಡೊಂದ ಹಾಡುವೆ " (ನಾಂದಿ)—ಎಂಬಂತೆ.

ಶ್ರೀರಾಮದೂತನೆ ಓ ಎನ್ನ ಗುರುವೆ ।
ಸಿರಿಭಕ್ತಿಗುಣನಿಧಿಯೆ ನೀನೆಂದು ಒರುವೆ ॥ ಪ ॥
ಶ್ರೀಮಂತ ಕಾಣಿಕೆಯ ನಾ ನೀಡಲಾರೆ ।
ಲಯಬದ್ಧ ವರಗಾನ ನಾ ಹಾಡಲಾರೆ ॥
ನಯವಿನಯ ಸೌಜನ್ಯ ಎನ್ನಲ್ಲಿ ಇಲ್ಲಾ ।
ಭಯಭಕ್ತಿ ಪರವಶದಿ ನಾ ಭಜಿಪೆ ನಿನ್ನಾ ॥ ೧ ॥
ನಿನ್ನೊಂದು ಪದಧೂಳಿ ಬಹು ಶ್ರೇಷ್ಠವೆಂದೂ ।
ನಾ ತಿಳಿದು ಓ ಗುರುವೆ ಈ ಪೂಜೆಗೈವೇ ॥
ಪದಸೇವೆ ಸೌಭಾಗ್ಯ ನೀನಿತ್ತು ತಂದೇ ।
ಮುದದಿಂದ ನೀ ನೀಡು ಚಿರಶಾಂತಿ ಇಂದೇ ॥ ೨ ॥
ಇನ್ನೊಮ್ಮೆ ವರ ನಿನ್ನ ನಾ ಧ್ಯಾನಗೈವೇ ।
ನೀ ತೊರೆಯ್ಯೆ ಚಿರಮೌನ ಹೇ ದೇವ ಪ್ರಭುವೇ ॥
ಮನದಲ್ಲಿ ನೆಲಸೈಯ್ಯಾ ಓ ತಾಳ್ಯದ್ಧನುಮಾ ।
ಮುನಿಸನ್ನು ನೀ ತೊರೆದು ತೋರಯ್ಯ ಪ್ರೇಮಾ ॥ ೩ ॥

೨೩. " ಉಡುಗೊರೆಯೊಂದಾ ತಂದಾ " (ನಾಂದಿ)—ಎಂಬಂತೆ,

ಹನುಮನು ಬಂದಾ ಬಂದಾ । ಎನ್ನಯ ಹೃದಯಾನಂದಾ ॥
ಅನುಪಮ ಶಾಂತಿಯ ತಂದಾ
ಮನವನು ತಣಿಸುತ ನಿಂದಾ ॥ ಪ ॥
ನಾನೇ ನಿನ್ನವನೆಂದಾ । ಮನದಲಿ ಮೃದುನುಡಿಯೆಂದಾ ।
ತನುವೆಂಬಾ ಬೊಂಬೆಯದೂ ।
ಕುಣಿದಾಡಿತು ಪರವಶದಿಂದಾ ॥ ೧ ॥
ಭಕ್ತಿಯ ಕಾಣಿಕೆಯೊಂದಾ । ಭಕ್ತನೆ ನೀನೀಡೆಂದಾ ।
ಭಕ್ತಿಯುಲೀ ಸುಮ ಒಂದಾ ।
ಇತ್ತೆನು ನಾ ಮುದ ದಿಂದಾ ॥ ೨ ॥
ತಾಳ್ಯದ ಹನುಮನು ತಾನೂ ।
ತಾಪವ ನೀಗೆಪೆನೆಂದಾ ॥
ತಾಮಸವಾ ತಾ ಕಳೆದೂ ।
ತ್ವರಿತದಿ ಸಲಹುವೆನೆಂದಾ ॥ ೩ ॥

[ ೨೪. "ಚಂದ್ರಮುಖ ಪ್ರಾಣಸಖೀ" (ನಾಂದಿ)—ಎಂಬಂತೆ ]

ವಾಯುಸುತಾ । ರಾಮಹಿತಾ । ಹನುಮಾ, ನೀ ಬಾರೋ
ರಾಮನ ತಾರಕಮಂತ್ರವ ಸಾರುತ ।
ಕರುಣೆಯ ನೀ ತೋರೋ ॥ ಪ ॥
ತನುವಿನ ಕರ್ಮವ ಹರಿಸುತಲೀ । ಸನ್ಮತಿ ನೀಡುತಲೀ ।
ಧರ್ಮದ ಜೀವನ ನಡೆಸುವ ಪರಿಯಾ ।
ಮರ್ಮವ ತಿಳಿಸುತಲೀ ॥ ೧ ॥
ಕಿಂಕರ ನಾನೂ ಅನುಗಾಲದಲೀ । ಎನಿಸುವ ಪರಿಯಲ್ಲೀ ॥
ಸಂಕಟಹಾರಕ ತಾಳ್ಯದ ಹನುಮಾ ।
ಕರುಣೆಯ ತೋರುತಲೀ ॥ ೨ ॥
ವಾಯುಸುತಾ । ರಾಮಹಿತಾ । ಹನುಮಾ ನೀ ಬಾರೋ ।
ರಾಮನ ತಾರಕ ಮಂತ್ರವ ಸಾರುತ ।
ಕರುಣೆಯ ನೀ ತೋರೋ ॥ ಸತತವು
ಕರುಣೆಯ ನೀ ತೋರೋ । ನಿರತವು ।
ಕರುಣೆಯ ನೀ ತೋರೋ . . . ॥

೨೫. "ನಮ್ಮ ತಾಯಿ ಭಾರತಿ" (ನಾಂದಿ)—ಎಂಬಂತೆ

ನಮ್ಮ ದೇವ ಮಾರುತೀ । ನಮ್ಮ ಗುರುವು ಮಾರುತೀ ॥
ನಮ್ಮ ತಾಯಿ । ನಮ್ಮ ತಂದೆ । ನಮ್ಮ ಬಂಧು ಮಾರುತೀ ॥ ಪ ॥
ವಿಘ್ನವನ್ನು ನಾಶಗೊಳಿಪ ದೇವ ಗಣಪತೀ ।
ವಿದ್ಯೆಯನ್ನು ನೀಡಿ ಒಲಿವ ತಾಯಿ ಸರಸ್ವತೀ ॥
ವೇದನಾದ ಬೋಧದಾ ಸತ್ಯರೂಪ ಮಾರುತೀ ॥ ೧ ॥
ಆರುವರ್ಗ ಅರಿಗಳನ್ನು ನಾಶಮಾಡುವಾ ।
ಸಾರಸಾಕ್ಷದೇವನವನು ಶಕ್ತಿರೂಪ ತಾ ॥
ಹರಿಯು ಅವನೆ ಅಜನು ಅವನೇ ಹರನು ಅವನೇ ಮಾರುತೀ ॥ ೨ ॥
ಸತ್ಯ ಶಾಂತಿ ನೇಮ ಜ್ಞಾನ ಪರಮ ಕೀರುತೀ ।
ನಿತ್ಯ ತೃಪ್ತಿ ನೀಡಿ ಪೊರೆವ ಪ್ರೇಮ ಮೂರುತೀ ॥
ಭೃತ್ಯನಾಗಿ ರಾಮಸೇವೆ ಮಾಡಿ ಮೆರೆದ ಮಾರುತೀ ॥ ೩ ॥
ದೇಶಸೇವೆ ದೇವಸೇವೆ ಎಂದು ತಿಳಿಯುತಾ ।
ಈಶ ತಾಳ್ಯದ್ಹನುಮನಲ್ಲಿ ಶರಣು ಹೋಗುತಾ ॥
ದೋಷ ಹರಿಸಿ ಸಲಹು ಎಂದು ನಾವು ಅವನ ಬೇಡುವಾ ॥ ೪ ॥

೨೬. "ಅಪಾರ ಕೀರ್ತಿ ಗಳಿಸಿ" (ವಿಜಯನಗರದ ವೀರಪುತ್ರ)—ಎಂಬಂತೆ

[ ಭವ್ಯವೇದಗಳಲ್ಲಿ, ಶಾಸ್ತ್ರಗಳ ತಿರುಳಲ್ಲೀ ।
ಭಾವುಕರ ಸತ್ಯದಾ ನುಡಿಯಲ್ಲೀ .... ॥
ಸಂಗೀತ ನಾದದಲಿ, ಕಾವ್ಯಗಳ ಸುಧೆಯಲ್ಲೀ .... ।
ತುಂಬಿಹುದು ವರ ನಿನ್ನ ನಾಮಾ ॥ ]
ನಮಾಮಿ ರಾಮಚಂದ್ರ ಪ್ರಭುವೇ ನಿನ್ನ ಮೂರ್ತಿಯೇ ।
ಪ್ರಣಾಮಿ ವಿಭುವೆ ಸತ್ಯ ಧರ್ಮ ಪರಮ ಕೀರ್ತಿಯೇ ॥
ನಮಾಮಿ ರಾಮನೇ ॥ ಪ ॥

111298

ಭಾವಭಕ್ತಿಯಿಂದಾ ॥ ಭಜಿಪ ಮನವ ನೀಡೂ ।
ಭಾನುಜನೆ ಪಾಪಗಳ ದುರಿತ ದೂರಮಾಡು ।
ಭಾನುಜನೆ ಪಾಪಗಳ ದುರಿತ ದೂರಮಾಡೂ ॥ ೧ ॥
ವೇದದಲ್ಲಿ ನಿನ್ನಾ । ಪಾದವನ್ನು ತೋರೀ ।
ಹೃದಯದಲಿ ಸ್ಥಾಪಿಸು ನೀ ನಿನ್ನಯ ರೂಪಾ ।
ಹೃದಯದಲಿ ಸ್ಥಾಪಿಸು ನೀ ನಿನ್ನಯ ರೂಪಾ ॥ ೨ ॥
ಸತತ ನೀಡು ನಿನ್ನ ಕರುಣ ಸೀತಾರಾಮಾ ।
ಸತ್ಯಗುಣವ ಇತ್ತು ಸಲಹು ರಾಜಾರಾಮಾ ॥
ತಾಳ್ಮೆದ್ಹನುಮ ನಾಥಾ । ತಾಪ ನೀಗು ಸ್ವಾಮಿ ।
ತ್ರಾಹಿ ತ್ರಾಹಿ ಭುವನಗುರುವೆ ಜಗದಭಿರಾಮಾ ॥ ೩

೨೭. "ಒಂದೇ ಮಾತು ಒಂದೇ ಮನಸು" (ಕನ್ಯಾರತ್ನ)—ಎಂಬಂತೆ

ಸೀತಾರಾಮ । ರಾಜಾರಾಮ । ಜೈ ಜೈ ರಾಮನಾಮಾ ॥
ಎಂದು ಹಾಡುತ ಭಕ್ತರೆಲ್ಲರೆ, ಮಾಡಿ ನಿತ್ಯಸೇವಾ ॥ ಪ ॥
ನಾಮಾ ಮಧುರ ಮಧುರಾ । ನಾಮಾಮಹಿಮ ಪರಮಾ।
ರಾಮನಾಮವನ್ನು ಗುಹನು ಹಾಡಿ ನಲಿದಾ ॥
ಕಾಮವೆಲ್ಲ ದೂರಾ । ರಾಮನಾಮದಿಂದಾ ।
ಪ್ರೇಮದಲೀ, ನಾಮವನೂ । ಪಾಡಿ ಗಳಿಸಿ ಅನಂದ ॥ ೧ ॥
ಸೀತಾ ನುಡಿದ ನಾಮಾ । ವಾತಾತ್ಮಜನ ಪ್ರೇಮಾ ।
ಭೂತನಾಥ ನುಡಿದ ಪರಮ ರಾಮನಾಮಾ ॥
ಭಜಿಸಿ ಭಜಿಸಿ ಭಜಿಸಿ ತಾಳ್ಮೆದ್ಹನುಮ ಪ್ರಿಯನ ।
ಭಾವ ಭಕುತಿಯಿಂದಾ । ಸ್ಮರಿಸಿ ಗಳಿಸಿ ಸುಖವ ॥ ೨ ॥

೨೮. " ಕೊಯಿ ಜಬ್ ರಾಹ್‌ನ ಪಾಯೇ " ದೋಸ್ತಿ—ಎಂಬಂತೆ

ವರಗುರು ಮಾರುತಿರಾಯಾ । ನಮೋ ಗುರುದೇವಾ | ನೀ
ಜಯ ಜಯ ದೀನರೋದ್ಧಾರಾ.... । ಮಮಕಾರಾ ಹರಬಾ.... ।
ಮಮಕಾರಾ ಹರಬಾ ॥ ಪ ॥

ನೀಗಿಸು ನೀ ಭವಬಂಧನಾ । ನೀಡುತ್ತ ಬಾ ಚಿರಚೇತನಾ ॥
ನೀ ಮಾಡು ಎನ್ನಾಮನಾ ಪಾವನಾ । ನೀ ಮಾಡು ಎನ್ನ ಮನ ಪಾವನ ॥
ನಿವಾರಿಸು ನೀ ಭವಪಾಶಾ । ನಿಭಾಯಿಸು ಆಶಾ । ನೀ
ನಿರತವು ಹರಿಸೆನ್ನ ದೋಷಾ | ಮಮಕಾರಾ ಹರ ಬಾ ॥ ೧ ॥

ಆಲಿಸು ನೀ ಎನ್ನ ಕರೆಯಾ । ಆವರಿಸೂ ಎನ್ನ ಮನವಾ ।
ಆಶ್ರಯದಾತಾ ಜಯ ಮಾರುತೀ । ಆಶ್ರಯದಾತಾ ಜಯ ಮಾರುತೀ ॥
ಅಮಾನುಷ ಗುರುವೂ ನೀನೇ । ಅಜಾಹರಿ ನೀನೇ । ನೀ
ಅಭಯವ ನೀಡುತ್ತ ಬಾರೋ । ಮಮಕಾರಾ ಹರ ಬಾ ॥ ೨ ॥

ಮಾಡುವೆ ನಾ ಕರ್ತವ್ಯವಾ । ಆಡುವೆ ನಾ ಸತ್ಯವನೂ |
ಹಾಡೂತ್ತ ನಲಿವೆ ನಿನ್ನ ನಾಮವಾ ॥ ಹಾಡೂತ್ತ ನಲಿವೆ ನಿನ್ನ ನಾಮವಾ
ಗುರುವರೆ ತಾಳ್ಮದ ಹನುಮಾ । ಪರಾಕ್ರಮ ಭೀಮಾ ।
ನೀ ನಿರತವು ತೋರಯ್ಯ ಪ್ರೇಮಾ । ಮಮಕಾರಾ ಹರ ಬಾ ॥ ೩ ॥

೨೯. " ಚಾಹುಂಗ ಮೈತುಝೇ " (ದೋಸ್ತಿ)—ಎಂಬಂತೆ

ಹೇ ಅಭಯಂಕರಾ । ಮಾರುತಿ ದೇವಾ ।
ಇರಿಸು ನೀ ದೇವನೇ ಭಕ್ತಿಯಭಾವಾ....ಜ್ಞಾನೇಶ ದೇವದೇವ ।
ಜ್ಞಾನೇಶ ದೇವದೇವ ॥ ಪ।

ವಾಯುಸುತಾ । ಸುರವಿನುತಾ ॥ ನಮಿಪೆ ವಿಭೋ । ಸಲಹೋ ಪ್ರಭೋ।
ಹನುಮಾ....ಪರಮಾ....ಜನುಮ ನೀಗು ನೀಗು ।
ಜ್ಞಾನೇಶ ದೇವದೇವಾ.... । ಜ್ಞಾನೇಶ ದೇವದೇವಾ ॥ ೧ ॥
ಪ್ರೀತಿಯು ನೀ ನೀತಿಯು ನೀ ॥ ಸತ್ಯವು ನೀ । ಜ್ಯೋತಿಯು ನೀ ।
ಹನುಮಾ.... । ಪರಮಾ....ಜನುಮ ನೀಗು ನೀಗು ।
ಜ್ಞಾನೇಶ ದೇವ ದೇವ । ಜ್ಞಾನೇಶ ದೇವ ದೇವಾ ॥ ೨ ॥
ಪೂಜಿಪೆ ನಾ । ಭಜಿಸುವೆ ನಾ ಧ್ಯಾನಿಪೆ ನಾ | ಕೂಗುವೆ ನಾ .... |
ಹನುಮಾ.... । ಮನವಾ....ತಣಿಸು ತಾಳ್ಮದ್ಧನುಮ.... ।
ಜ್ಞಾನೇಶ ದೇವ ದೇವ । ಜ್ಞಾನೇಶ ದೇವ ದೇವಾ ॥ ೩ ॥

೩೦. "ಸೇವಂತಿಗೇ ಚೆಂಡಿನಂತ ಮುದ್ದು ಕೋಳಿ" (ಚಿನ್ನದ ಗೊಂಬೆ)—ಎಂಬಂತೆ

ಧೀಮಂತನಾ ನಾಮವನ್ನು ಪಾಡು ಜೀವಾ |
ಧೀರ ಹನುಮನನೂ ಪೂಜಿಸುತ ಬಾಳು ಜೀವಾ ‖ ಪ ‖
ಎಲ್ಲ ನನ್ನದೂ ಎನುವ ಭ್ರಮೆಯ ನೀಗೀ.... |
ಬಲ್ಲ ಪ್ರಭುವಿನಲಿ ಲೀನನಾಗಿ ಬಾಳು ಜೀವಾ ‖ ಅ. ಪ ‖
ಸೇವೆಯಲಿ ಅನುದಿನವೂ ಕಾಲದೂಡುತಾ |
ಭಾವ | ಭಕುತಿಯಲಿ ದೇವನನು ಪೂಜೆಗೈಯುತಾ ‖
ಜೀವನದಾ ಬೇವಿನಲ್ಲಿ ಸಿಹಿಯ ತುಂಬುತಾ |
ಕಾವ | ಪ್ರಭುವಿನಲೀ ಲೀನನಾಗಿ ಬಾಳು ಜೀವಾ ‖ ೧ ‖
ಭೂಮಿಜೆಯ ಹೃದಯದಲಿ ವಾಸಮಾಡುವಾ |
ರಾಮ | ಚರಣದಲಿ ಶಿರವನಿಟ್ಟು ಧ್ಯಾನಗೈಯುವಾ ‖
ಪ್ರೇಮದಿಂದ ಸಲಹುವಂಥ ತಾಳ್ಯದ್ಹನುಮನಾ |
ನೇಮಭಕ್ತಿಯಿಂದ ನಿತ್ಯ ನೀನು ಪಾಡು ಜೀವಾ ‖ ೨ ‖

೩೧. " ಗೂಡಿನಲೀ...." ಚಿನ್ನದ ಗೊಂಬೆ)—ಎಂಬಂತೆ

ಧ್ಯಾನಿಸುವೇ....ತಂದೆ ಶ್ರೀರಾಮ | ಪರಿ
ಪಾಲಿಸು ನೀ....ಓ ಗುಣಧಾಮ ‖ ಪ ‖
ಚಿನ್ಮಯರೂಪ ನಮೋ ಸಿರಿವರ ರಘುರಾಮಾ |
ಆಲಿಸು ಈ ಮೊರೆಯಾ ಓ ರಾಮಾ ‖ ಅ. ಪ ‖
ಕಲ್ಲಿನ ರೂಪದಾ | ಅಹಲ್ಯೆಯನು ನೀನೂ |
ಪಾಲಿಸಿದೇ ಅಂದು ಸಿರಿರಾಮಾ ‖
ಆಲಿಸಿ ಶಬರಿಯ ಮೊರೆಯನ್ನು | ಬಂದು
ಹರಸಿದೆಯೋ ನೀ ಜಯರಾಮ ‖ ೧ ‖
ಕಣ್ಣೀರ್ ಕರೆದಾ ತಂದೆಯನೂ |
ತಣಿಸಿ, ನೀ ಹೊರಟೆ ಅಡವಿಕಡೆ ರಾಮಾ ‖
ಲಕ್ಷ್ಮಣ ಸೀತಾ ನಿನ್ನೊಡೆ ಬರಲಂದು |
ಒಲಿಸಿದೆಯೋ ಅವರಾ ಗುಣಸೀಮ ‖ ೨ ‖
ಬಂದು ಆದರಿಸು ಮನವನು ಇಂದೇ |
ಬಂಧನ ನೀಗುತ ಪಾಲಿಸು ತಂದೇ ‖
ತಾಳ್ಯದ ಹನುಮನೆ ನಾಥನೆ ವಂದೇ |
ತವ ಪಾದಾ ತೋರು ನೀ ಇಂದೇ ‖ ೩ ‖

೩೨. " ನೋಡಲ್ಲಿ ಮೆರವಣಿಗೆ " (ಚಿನ್ನದ ಗೊಂಬೆ)—ಎಂಬಂತೆ

ನೋಡಲ್ಲಿ ಗುರುವರನು | ಮುಚ್ಚಿಹನು ಕಂಗಳನೂ |
ರಾಮಾ ರಾಮಾ | ರಾಮಾ ಎಂದೂ.... | ಧ್ಯಾನಿಸುತ ತಾ ಕೂತಿಹ ||ಪ||
ಧರಿಸಿಹನು ತುಳಸಿಯಮಾಲೆ | ತೋರುವನು ತನ್ನಯ ಲೀಲೇ |
ಕರಗಳಲಿ ದಂಡವ ಪಿಡಿದೂ, ಅಭಯವನೆ ತೋರುತಾ ||
ಬೀರುತಿಹ ಸೌಜನ್ಯ | ವರಬ್ರಹ್ಮಚೈತನ್ಯಾ.... ||
ಬಾರೋ, ಶರಣಾಗೋ, ವರವ ಕೇಳಯ್ಯಾ || ೧ ||
ಪರಮೇಶನ ರೂಪವು ಅವನು | ಶ್ರೀರಾಮ ದಾಸನು ತಾನೂ |
ಶ್ರೀ ತಾಳ್ಯದ್ಹನುಮನ ಕಂಡು, ಶರಣಾಗು ನೀನೂ ||
ತಾರಕವ ನೀ ಬೇಡು | ರಾಮನನು ಧ್ಯಾನಮಾಡು |
ನೋಡೀ, ನೀ ಹಾಡೀ, ಮತಿಯಾ ಬೇಡಯ್ಯಾ || ೨ ||

೩೩. " ಮಣ್ಣಲಿ ಕಲೆಯ ರೂಪಿಸುವೇ " (ಚಿನ್ನದ ಗೊಂಬೆ)

ಚಿನ್ಮಯ ಸದ್ಗುರು ಚೈತನ್ಯ | ನಾ ನಿರತವು ನಿನ್ನನು ಪೂಜಿಸುವೇ ||
ಮನ್ಮನಮಂದಿರ ಮಂಟಪದೀ | ಸಂತತ ನಿನ್ನಯ ಪಾದವಿಡೋ || ಪ ||
ಹೃದಯದ ಪೀಠವು ತಾ ನಿನಗೇ | ಮಂದಾಸನ ಎಂದು ನೀ ತಿಳಿ ದೇವಾ ||
ಮುದದಲಿ ಭಜಿಸುವೆ ಅನುದಿನವೂ |
ನೀ ಹರಿಸಯ್ಯ ಆಶೆಯನೂ | ನೀ ಹರಿಸಯ್ಯಾ ಆಶೆಯನೂ || ೧ ||
ಜೀವನವೆಲ್ಲವು ನಿನದಯ್ಯಾ | ಗುರುಸೇವಕಮಾತ್ರನು ನಾನಯ್ಯಾ ||
ಕಾವುದು ತಾಳ್ಯದ ಹನುಮಯ್ಯಾ |
ನಾ ಮೈಮರೆವೆನೊ ನಿನ್ನಲ್ಲೇ | ನಾ ಮೈಮರೆವೆನೊ ನಿನ್ನಲ್ಲೇ || ೨ ||

೩೪. " ನಾನೇ ವೀಣೆ, ನೀನೇ ತಂತಿ " (ಮಾವನ ಮಗಳು)—ಎಂಬಂತೆ

ಸ್ವಾಮೀ ದೇವಾ | ಪ್ರಾಣನಾಥ |
ಹನುಮಾ ವಂದಿಪೇ | ಹನುಮಾ ವಂದಿಪೇ || ಪ ||
ಜನುಮ ಮರಣ | ಪಡೆದು ಪಡೆದು |
ನೊಂದು ನೊಂದೂ | ಘಾಸಿಗೊಂಡೇ.... |
ಕರ್ಮ ನೀಗಿಸೂ | ಕರ್ಮ ನೀಗಿಸೂ || ೧ ||
ಮದವು ಮೋಹಾ | ಕಾಮ ಕ್ರೋಧಾ....ಪಡೆದು ನಾ....ನೂ ||
ಮುಂದೆ ದಾರಿ ಕಾಣದಾದೇ | ಬಂದು ಸಲಹೋ ತಾಳ್ಯದ್ಹನುಮಾ ||
ಅಚ್ಯುತ ದಾಸಾ | ಅಚ್ಯುತ ದಾಸಾ || ೨ ||

೩೫. ಓ ಎನ್ನ ಬಾಂಧವರೇ...." (ಚಂದವಳ್ಳಿಯ ತೋಟ)—ಎಂಬಂತೆ.

[ಓ ಭಕ್ತಬಾಂಹವರೇ | ಸದ್ಗುರು ನಿಜಶಿಷ್ಯರೇ |
ನೈಮರೆತು ಭಜಸಿರೀ .... | ಶ್ರೀರಾಮನಾಮ ||
ರಾಗ ಲಯ ಸ್ವರ ಬೇಡ | ತಾಳಮೇಳವು ಬೇಡ ||
ಚೈತನ್ಯ ಗುರು ನುಡಿದ ಅತಿ ಸರಳಮಾರ್ಗ || ]
ಧರ್ಮದ ಜೀವನ ಪಾಲಿಸಿರೀ .... ಪೂಜಿಸಿರೀ |
ಕರ್ಮವ ಕಳೆವ ಮರ್ಮವ ಅರಿತೂ | ಮಾಡಿರಿ
ಜನ್ಮವ ಪಾವನವಾ .... || ಪ ||
ಕಾಮಕೆ ಕ್ರೋಧಕೆ ಸಿಲುಕದೆ ನೀವು |
ನೇಮದಿ ಗುರುವಿಗೆ ಶರಣಾಗೀ ||
ಪ್ರೇಮದ ಹಾದಿಯು ಶಾಂತಿಗೆ ಮೂಲಾ |
ರಾಮನ ಧ್ಯಾನಿಸಿ ಜಿವಿಸಿರೀ .... || ೧ ||
ತ್ರಯಗುಣ ಮೀರಿದ ಗುರುವಿಗೆ ನಮಿಸೀ |
ತಾಮಸ ಬಾವವ ನೀವ್ ಕಳೆದೂ ||
ತಾಳ್ಮೆದ ಹನುಮನ ನಿರತವು ನೆನೆದೂ |
ಶಾಪಕೆ ಸಿಲುಕದೆ ಜೀವಿಸಿರೀ.... || ೨ ||

೩೬. "ಸುಮಬಾಲೆಯ ಪ್ರೇಮದಸಿರಿಯೇ" (ಚಂದವಳ್ಳಿಯ ತೋಟ)-ಎಂಬಂತೆ.

ವರಮೂರುತಿ ಪ್ರೇಮದ ನಿಧಿಯೇ |
ಪರೇಶ ದೇವ ಪ್ರಭುವೇ | ಮಹಾನುಭಾವ ವಿಭುವೇ |
ಬಾರಯ್ಯ ಎನ್ನಗುರುವೇ || ಪ ||
ಎನ್ನನು ಮುಸುಕಿದೆ ಕಡು ಮಾಯೇ |
ಕಾಣದು ನಿನ್ನಯ ವರ ಛಾಯೇ ||
ಮನಸಾರೆ ಕರೆವೆ ನಾ ಜೀಯ | ಹನುಮಂತ ಹರಿಯೋ ಈ ಮಾಯ |
ಬಾ ದೇವನೇ, ಗುರುರಾಯನೇ | ಕಣ್ಣಲ್ಲಿ ನಲಿಯೋ ಗುರುವೇ || ೧ ||
ಎನ್ನಯ ತಪ್ಪನು ನೀ ದೂಡೋ | ತನ್ಮಯ ಚಿತ್ತವ ನೀ ನೀಡೋ ||
ಮುನಿಸನ್ನು ತೊರೆಯೊ ಹೇ ದೇವಾ | ಮನದಲ್ಲಿ ನೆಲಸು ಸಂಜೀವಾ |
ಓ ಹನುಮನೆ, ಗುಣಧಾಮನೆ | ಎನ್ನಯ್ಯ ಬಾರೊ ಗುರುವೇ || ೨ ||
ಭಕ್ತರ ಕಣ್ಣಿಗೆ ಕಣ್ಣಾಗಿ |ಶಕ್ತಿಯ ರೂಪವು ನೀನಾಗಿ ||
ಅಜ್ಞಾನ ಅಂಧವ ಕಳೆವಾ | ಸುಜ್ಞಾನ ಜ್ಯೋತಿಯಾಗಿರುವಾ |
ಗುರುದೇವನೆ, ನಾ ವಂದಿಪೆ | ಬಾ ತಾಳ್ಮೆದ್ಹನುಮ ಪ್ರಭುವೆ || ೩ ||

೩೭. " ನಮ್ಮ ಮನೆಯೆ ನಂದನ " (ಚಂದವಳ್ಳಿಯ ತೋಟ)—ಎಂಬಂತೆ.

ದತ್ತ ಗುರೂವಂದನೇ | ಜೈ ಗುರುವೆ ವಂದನೆ
ನಿತ್ಯ ಶಾಂತಿ ನೀಡುತಾ । ಮಿಥ್ಯಭಾವ ನೀಗಿಸೂ || ಪ ||
ಆತ್ರಿ ಮುನಿಯ ಕಂದನೇ | ಸತ್ಯಜ್ಞಾನದೇವನೇ ।
ನಿತ್ಯ ನಿನ್ನ ಸ್ಮರಿಸಿದೊಡನೆ| ನಲಿವುದೆನ್ನ ಜೀವವೂ || ೧ ||
ಚಿತ್ತ ಶುದ್ಧಿ ಗೈಯುತಾ । ಕಾಯೊ ದೇವ ದತ್ತನೆ |
ಇತ್ತು ಆಚಲ ಭಕ್ತಿಯನ್ನು । ಸಲಹು ಎನ್ನ ಸ್ವಾಮಿಯೇ || ೨ ||
ಶೂಲಪಾಣಿ ಶಂಕರಾ | ಪದ್ಮಧಾರಿ ಬ್ರಹ್ಮನೇ |
ತಾಳ್ಯದ್ಹನುಮ ನಾಥನೀನು । ಸಲಹು ದೇವ ಕೇಶವಾ || ೩ ||

೩೮. " ಅಚ್ಚಮಲ್ಲಿಗೆ ಹೂವು " (ಸತೀಶಕ್ತಿ)—ಎಂಬಂತೆ.

ನಿತ್ಯ ತೃಪ್ತನೆ ದೇವಾ | ನಿರ್ಗುಣಾ ನಿರ್ಲೇಪಾ |
ಸತ್ಯಗುರೂ ನಿರ್ಮಲಾ | ನೀ ಪರಿತಾಪ ನೀಗಯ್ಯಾ || ಪ ||
ನಿನ್ನ ನಾನು ಮರೆಯಲಾರೆ | ಸನ್ನುತಾಂಗದೇವದತ್ತ ।
ಅನ್ಯ ಏನೂ ಬೇಡಲಾರೇ | ನಿನ್ನ ಭಕ್ತಿಯೊಂದೇ ಸಾಕು || ೧ ||
ಬೇಡಿಕೊಂಬೆ ದೇವ ನಿನ್ನ | ನೀಡು ನಿನ್ನೊಳು ಭಕ್ತಿಯನ್ನು |
ವಾಡಿವಾಸ ದತ್ತದೇವಾ | ಮಾಡುವೇನಾ ಪಾದಸೇವಾ || ೨ ||
ಕುರವ ಪುರದ ವಾಸ ದೇವಾ । ಕರುಣೆ ತೋರುತ ಹರಿಸುಮಾಯಾ |
ಕರೆವೆ ತಾಳ್ಯಾದ್ಹನುಮ ಪ್ರಿಯನೇ । ಕಣ್ಣು ತೆರೆಸಿ ಕಾವುದಯ್ಯಾ || ೩ ||

೩೯. " ಹೇ ಪಾಂಡುರಂಗಾ " (ಸಂತ ತುಕಾರಾಂ)—ಎಂಬಂತೆ

ಹೇ ದೇವದತ್ತಾ.... | ಅನುಸೂಯ ಕಂದಾ ।
ಹಾದಿ ಹಾಡಿ ನಲಿವೆ ನಿತ್ಯಾ | ಅಮರ ನಿನ್ನ ನಾಮಾ || ಪ ||
ನನ್ನ ನಿತ್ಯ ಕರ್ಮವ ಮಾಡೀ | ನಿನ್ನ ಸ್ಮರಣೆ ಗೈಯುತಾ |
ನಿನ್ನ ಸತ್ಯ ರೂಪವ ನಾನೂ | ನೋಡುವಂತೆ ಕರುಣಿಸೂ ||
ಅನ್ಯ ವಿಷಯ ಬಾರದಂತೆ | ಚಿತ್ತಯಿಸು ದತ್ತನೇ |
ಧನ್ಯ ನೆನಿಸಿ ಕಾಯೊ ದೇವಾ | ಬಿನ್ನವಿಪೇ ಶ್ರೀಗುರೋ || ೧ ||
ತಂದೆ ನೀನು ತಾಯಿಯು ನೀನೆ | ಬಂಧು ಗುರುವು ನೀನಯ್ಯಾ |
ಕಂದ ನಾನು ನಿನ್ನವನೆಂದು | ಬಂಧಹರಿಸಿ ಪಾಲಿಸೂ ||
ಚಂದ್ರಧಾರಿ ದೇವದೇವ | ತಾರಕಾರಿ ಬಾರಯ್ಯಾ |
ಮಂದಮತಿಯ ನೀಗು ನೀನು | ತಾಳ್ಯದ್ಹನುಮನ ದೇವನೇ || ೨ ||

೪೦. “ ಓ ಪ್ರಾಣಸಖಾ ನೀನೆಲ್ಲಿರುವೆ ” (ಚಂದ್ರಹಾಸ)—ಎಂಬಂತೆ

ಹೇ ವಾಯುಸುತಾ ನೀನೆಲ್ಲಿರುವೇ ।
ನಾ ನಿನ್ನನು ಅರಸೀ ಬಂದಿಹೇ ॥
ನಿನಗಿಂತಹ ಮೌನವು ನ್ಯಾಯುವೇ ॥ ಪ ॥
ಕನಸಲಿ ಮನಸಲಿ ನಿನ್ನನು ಕಂಡೇ ।
ನನಸಲಿ ಕಾಣದೆ ನಾ ಬಹು ನೊಂದೆ ॥
ಅಂಧಕಾರವಾ ನೀಗಿಸು ತಂದೇ.... ॥
ಏತಕೇ । ಕಾಡುವೇ । ಕಾಣಿಸದೇ ॥ ೧ ॥
ಮಂದಿರ ದೊಳಗಡೆ ಶಿಲೆಯಲಿ ನಿಂದೆ ।
ಸುಂದರ ವಾಗಿಹ ಕಲೆಯೊಳು ನಲಿದೆ ॥
ಎಂದಿಗೆ ನಿಲ್ಲುವೆ ಎನ್ನಯ ಮುಂದೆ .... ।
ವಂದಿಪೆ । ಬಂಧುವೆ । ಒಲವಿಂದೆ ॥ ೨ ॥
ಕಣ್ಣಿಗೆ ಕಾಣಲಿ ನಿನ್ನಯ ಮೂರ್ತೀ ।
ಕಿವಿಯಲಿ ಕೇಳಲಿ ನಿನ್ನಯ ಕೀರ್ತೀ ॥
ಹೃದಯದಿ ನಲಿಯಲಿ ನಿನ್ನಯ ಜ್ಯೋತಿ ।
ತಾಳ್ಯದ । ಹನುಮನೆ । ಕೊಡು ಭಕುತಿ ॥ ೩ ॥

೪೧. “ಕನ್ನಡದ ಕುಲದೇವಿ ಕಾಪಾಡು ಬಾ ತಾಯಿ”(ಪೋಸ್ಟ್‌ಮಾಸ್ಟರ್)ಎಂಬಂತೆ

ದತ್ತ ಗುರು ಮಹದೇವ ಶ್ರೀಪಾದ ನೀ ಬಾರೋ ।
ಚಿತ್ತದಲಿ ನಿನ್ನವರ ರೂಪು ಗೊಂಡಿದೆ ದೇವಾ ॥ ಪ ॥
ವೀರ ಶೂಲವ ಧರಿಸಿ । ಶಂಖ ಚಕ್ರವ ಪಿಡಿದು ।
ನೀರ ಜಾಕ್ಷನೆ ನಿನ್ನಾ । ವರರೂಪ ತೋರೋ ॥
ಹರಿ ಹರನ ರೂಪದಲಿ । ಸಲಹು ಎಮ್ಮನು ದೇವಾ ।
ಪರಮ ಜ್ಞಾನವ ನೀಡಿ । ತುಂಬು ಭಕ್ತಿಯ ಭಾವಾ ॥ ೧ ॥
ಅವಧೂತ ರೂಪನೇ । ಅನುಸೂಯ ಸುತ ನೀನೇ ।
ಆಲಿಸುತ ಮೊರೆಯನ್ನು । ಅಜರೂಪ ಕಾಯೋ ॥
ಅಪರಾಧ ಮನ್ನಿಸುತ । ಅರಿಯ ದೂರೀ ಕರಿಸಿ ।
ಅಜ್ಞಾನ ನೀಗುತಾ । ಮನ್ನಿಸೂ, ಮನ್ನಿಸೂ ॥ ೨ ॥
ತಾಪ ನೀಗಿಸು ಗುರುವೇ । ತೋರು ಜ್ಞಾನದ ಹಾದೀ ।
ತಾಯಿ ತಂದೆಯು ನೀನೇ । ತೋರಯ್ಯ ಪ್ರೇಮಾ ॥
ತಾಮಸದ ಬೇಗೆಯಲಿ । ತಾರಿ ಬೆಂದಿತು ಜೀವಾ ।
ತಾಳ್ಯದ್ಹನುಮನ ಪ್ರಿಯನೆ । ತಂಪುಮಾಡು ನೀ ದೇವಾ ॥ ೩ ॥

೪೨. " ಜ್ಯೋತಸೆ ಜ್ಯೋತ ಜಗಾತೆ ಚಲೋ " (ಸಂತಜ್ಞಾನೇಶ್ವರ್)–ಎಂಬಂತೆ

ರಾಮನ ದಾಸ ಕಪೀಶ ನಮೋ |
ಪ್ರೇಮ ಸ್ವರೂಪಾ ಮಹೇಶ ನಮೋ || ಪ ||
ದಾನವ ಹಾರಿ ಪರೇಶ ನಮೋ |
ಪ್ರೇಮ ಸ್ವರೂಪಾ ಮಹೇಶಾ ನಮೋ || ಅ. ಪ ||
ಆಶಾಪಾಶ| ಬಳಸೀ ದೇಹ || ಈಶನೆ ನೊಂದೂ ದಣಿದೇ ||
ಪಾಶವಹರಿಸಿ |ದೋಷವಕಳೆದು | ಪೋಷಿಸುದೇವಾ ಹನುಮ ||
ವಾಯುಸುತಾ.... | ವಾಯುಸುತಾ ಗುರು ನಾಥ ನಮೋ ||
ಪ್ರೇಮ ಸ್ವರೂಪಾ ಮಹೇಶ ನಮೋ || ೧ ||
ಸೀತಾ ದೂತ | ಮಮತಾರೂಪ | ವಾತಾತ್ಮಜನೇ ಪೊರೆಯೋ |
ಮಾತಾಪಿತನು | ಭ್ರಾತಾನೀನು | ಸತ್ಯಾ ತಾಳ್ಯದ ಹನುಮಾ ||
ಭೃತ್ಯನು ನಾ....| ಭೃತ್ಯನು ನಾ ಚಿರಕಾಲ ಗುರೋ....||
ಪ್ರೇಮಸ್ವರೂಪಾ ಮಹೇಶಾ ನಮೋ || ೨ ||

೪೩. " ಆಧಾಹೈ ಚಂದ್ರಮಾರಾತ್ ಆಧೀ " (ನವರಂಗ್) — ಎಂಬಂತೆ.

ಗೋಂದಾವಲೇಕರಾ ಚೈತನ್ಯ |
ವಂದಿಸುವೆ ದೇವಗುರು ಚೈತನ್ಯ| ಸರ್ವ ಜಗಮಾನ್ಯ ||
ಗೋಂದಾವಲೇಕರಾ........ || ಪ ||

ಗುಣ ಕಾರುಣ್ಯ ಸಿಂಧುವೆ ಬಾರೋ |
ಘನ ವಾತ್ಸಲ್ಯ ನಿಧಿಯಾ ತೋರೋ ||
ಪ್ರಾಣದಾತಾ ವಿಭೋ | ಜ್ಞಾನದಾತಾ ಪ್ರಭೋ |
ಮನ ಗಂಭೀರ ದೇವ ನೀ ಸುರಮಾನ್ಯಾ || ೧ ||

ಮಮ ಕಾರಾಂತ ದೇವನೆ ನೀನೈ |
ತಮ ಸತ್ವಾದಿ ಗುಣಗಳ ನೀಗೈ |
ರಾಮದಾಸಾ ನಮೋ | ಪ್ರೇಮರೂಪಾ ನಮೋ |
ನಾಮ ಯಾಗಾವ ಗೈದೆಯೋ ದೇವ ವಂದ್ಯ || ೨ ||

ನವ ತಾರುಣ್ಯ ಮೂರುತಿ ದೇವಾ |
ತವ ಚರಣಾವ ನಂಬಿದೆ ನಾನೂ ||
ಭವನಾಶಾ ಗುರೋ | ವಿಶ್ವಪಾಲಾ ನಮೋ |
ಶಿವ ತಾಳ್ಯಾದ ಹನುಮನ ರೂಪ ನೀನೈ || ೩ ||

೪೪. " ತೆರೇ ಪ್ಯಾರಕಾ ಆಸರಾ ಚಾಹತಾಹೈ "(ಧೂಲ್–ಕಾ–ಫೂಲ್)ಎಂಬಂತೆ

ಪ್ರಭೋ ರಾಘವಾ | ಪಾಲಿಸೋ ಜಾನಕೀಶಾ |
ವಿಭೋ ವಿಶ್ವದೇವಾ | ಗುರೋ ಮಾರುತೀಶಾ || ಪ ||
ಮಹಾದೇವನೇ ನೀ | ಮಹಾವಿಷ್ಣುರೂಪಾ |
ಮಹಾನಂದ ನೀಡೋ | ಪರಬ್ರಹ್ಮರೂಪಾ || ಅ. ಪ ||
ಜಗದಾದಿ ದೇವಾ | ಪರಮಾತ್ಮರೂಪಾ |
ಘನಪ್ರೇಮ ಭಾವಾ | ಪರಿಪೂರ್ಣ ರೂಪಾ ||
ಜಗದೀಶ ನಿನ್ನನೂ ಹೃದಯದೊಳ್‌ ಇರಿಸೀ.... |
ಮನಾ ಜ್ಯೋತಿಯಂ, ಆರತೀ, ಮಾಡುವೇ ನಾ ||
ವಿಭೋವಿಶ್ವದೇವಾ | ಗುರೋ ಮಾರುತೀಶ || ೧ ||
ಅಣುರೇಣು ರೂಪಾ | ಕರುಣಾ ಸ್ವರೂಪಾ |
ಪ್ರಣವಾ ಪ್ರದೀಪಾ | ಭುವನಾತ್ಮ ದೀಪಾ |
ಗಣನೆಗೆ ಸಿಲೂಕದು ನಿನ್ನಯ ಮಹಿಮಾ |
ಮನೋಭೀಷ್ಮವಾ, ನೀಡು ಶ್ರೀರಾಮಚಂದ್ರಾ ||
ವಿಭೋವಿಶ್ವದೇವಾ | ಗುರೋ ಮಾರುತೀಶಾ || ೨ ||
ಬಹೂರೂಪದೇವಾ | ಮಹೀಮಾಂತ ರಂಗಾ |
ಇಹಪರ ತಾಪಾ | ದಹೀಸಿರ್ಪ ದೇವಾ ||
ಮಹಾದೇವ ತಾಳ್ಯದ ಹನುಮನ ನಾಥ |
ಗುಹಾವಂದ್ಯನೇ, ರಾಘವಾ, ಪಾಲಿಸಯ್ಯಾ |
ವಿಭೋ ವಿಶ್ವದೇವಾ | ಗುರೋ ಮಾರುತೀಶಾ || ೩ ||

೪೫. "ಹೇ ಮಾಲಿಕ್ ತೆರೇ ಬಂದೆ ಹಂ"(ದೋ ಆಂಖೆ ಬಾರಾ ಹಾತ್)ಎಂಬಂತೆ

ಹೇದೇವಾ ನಮೋ ಸದ್ಗುರೂ | ನೀ ಬಂದೆಮ್ಮ ಪರಿಪಾಲಿಸೂ |
ನಾರಣಪ್ಪಾ ಪ್ರಭೋ | ಗುರುನಾಥಾ ವಿಭೋ |
ಬ್ರಹ್ಮ ಚೈತನ್ಯ ದಾಸಾ ಗುರೋ || ಪ ||
ಪ್ರಾಣೇಶಾ ಮಹೇಶಾವರಾ | ಗುರು ಚೈತನ್ಯ ದಾಸಾ ನಮೋ |
ರಾಮನಾಮಾಪ್ರಿಯಾ ! ಕಾಮ ಬಾಧಾಹರಾ |
ಪ್ರೇಮ ಜ್ಯೋತೀಧರಾ ಪಾಲಿಸೈ || ೧ ||
ನೀ ಕರುಣಾಳು ದತ್ತಾಗುರೋ | ನೀ ಪರಮೇಶ್ವರಾ ಶಂಕರಾ |
ಪ್ರೇಮ ಜ್ಯೋತೀ ನಮೋ | ಶಾಂತಮೂರ್ತೀ ನಮೋ ||
ಪ್ರೇಮ ತಾಳ್ಯದ ಹನುಮಾಪ್ರಿಯಾ || ೨ ||

೪೨. " ಆಡೋಣ ಬಾ ಬಾ ಗೋಪಾಲಾ "(ಮಲ್ಲಿ ಮದುವೆ)–ಎಂಬಂತೆ.

ರಾಜೀವ ನೇತ್ರಾ .... ಓ ರಾಮಾ ।
ಹೇ ದೇವ ಬಾ ಬಾ ಶ್ರೀರಾಮಾ ॥ ಪ ॥

ಭಕ್ತನು ನಿನಗಾಗಿ ಭಜಿಸೋ ವೇಳೇ ।
ಬಯಸುವ ಕಂಗಳು ತೆರೆಯೋ ವೇಳೇ ॥
ಭಕ್ತಿಲಿ ಹೃದಯವು ಕರೆಯೋ ವೇಳೇ ।
ಭರದಲಿ ಬಂದೂ ದರುಶನ ನೀಡೋ ॥ ೧ ॥

ಒಂದೇ ಮನದೀ ಧ್ಯಾನವ ಗೈವೇ ।
ಬಂಧನ ಕಳೆವಾ ರಘುವರ ದೇವಾ ॥
ಕುಂದದ ಭೀಷ್ಟವ ನೀಡುತ ಕಾಯೈ ।
ಸುಂದರ ಸುಮಧುರ ಶ್ರೀವರ ರಾಮಾ ॥ ೨ ॥

ಹೃದಯಾ ನಂದಾ ಸೀತಾರಾಮಾ ।
ಆದರದಿಂದಾ ಪೂಜೆಯಗೈವೇ ।
ಸುಂದರ ತಾಳ್ಯದ ಹನುಮನ ದೇವಾ .... ।
ಬಂಧನ ಹರಿಸೋ ಓ ರಘುರಾಮ ॥ ೩ ॥

೪೩. " ಮದುವೆಯೆಂಬ ಸಂತೆಗೆ " (ಮಲ್ಲಿ ಮದುವೆ) — ಎಂಬಂತೆ

ಹನುಮನೆಂಬ ದೇವನ । ಕಾಣಲೆಂದು ಹೋದೆ ನಾ ।
ಕಂಡೆ ಶಿಲೆಯ ಪ್ರತಿಮೆಯ । ತೋರುತ್ತಿದ್ದ ಮಹಿಮೆಯಾ ॥ ಪ ॥

ಭಕ್ತಿವಂತ ಮನುಜರು । ಶಕ್ತರಾದ ಮಲ್ಲರು ।
ಬಲ್ಲವರು ಬಲ್ಲಿದರು । ಎಲ್ಲ ಭಜಿಸುತ್ತಿದ್ದರು ॥ ೧ ॥

ಹಣವ ಪಡೆಯೆ ಹಲವರು । ಗುಣವ ಬೇಡೆ ಕೆಲವರು ।
ತನುವನು, ಮನವನು । ಧನವನಿತ್ತು ಮೆರೆದರು ॥ ೨ ॥

ಪುಷ್ಪಫಲವ ಇತ್ತವರು । ತುಪ್ಪದೀಪ ಹಚ್ಚುವರು ।
ಹರಕೆಯೂ, ಅರಿಕೆಯೂ । ಸಲಿಸಿ ಅವರು ತಣಿದರು ॥ ೩ ॥

ತಾಳ್ಯದ್ಹನುಮ ಪ್ರಭುವರ । ತಾಳ್ಮೆಯಿಂದ ಎಲ್ಲರಾ ।
ಮನವನೂ, ತಣಿಸುತ । ಪೊರೆವ ಮಹಿಮೆ ಕಂಡೆನಾ ॥ ೪ ॥

೪೮. "ಸುವ್ವೀ ಸುವ್ವೀ ಸುವ್ವಾಲೇ" (ಕನ್ಯಾರತ್ನ)—ಎಂಬಂತೆ

ಕೃಷ್ಣಾ .......... ಕೃಷ್ಣಾ ..........
ಕೃಷ್ಣಾ ಕೃಷ್ಣಾ ಕನ್ನಯ್ಯಾ | ನೆನೆವೆ ಅನುಗಾಲಾ |
ರಾಧೇರಾಧೇ ರಾಧೇಯ | ಬಾರೋ ಗೋಪಾಲಾ || ರಾಧೆ ಗೋಪಾಲ ||ಪ||

ಯಮುನಾ ನದಿಯಾ ದಡದಲ್ಲೀ | ಎತ್ತಿದೆ ನೀಶೈಲಾ ರಾಧೆಗೋಪಾಲಾ ||
ಹರಿಯೆ ಸಿರಿಯೆ ಶ್ರೀಕೃಷ್ಣ ತೋರೋ ನೀ ಲೀಲಾ | ರಾಧೆಗೋಪಾಲ ||೧||

ರಾಸಲೀಲಾ ಆಡಿ ಆಡೀ ತಣಿದಾ ಭೂಪಾಲಾ .... | ಓ ಓ ಓ
ತಣಿವಾ ಭೂಪಾಲಾ ||
ಲಾಸ್ಯಕ್ರೀಡಾ ಮೋದದಿ ಮಾಡೀ ಹರಿಯೋ ವಿಷಜಾಲಾ | ಓ ಓ ಓ
ಹರಿಯೋ ವಿಷಜಾಲಾ ||
ಸರ್ವಕು ನೀ ಮೂಲಾ | ಮದ ಮೋಹಕೆ ನೀ ಕಾಲಾ || ೧ ||

ಮಾವನನ್ನು ಕೊಂದು ನಿಂತ | ದೇವಕಿ ವರ ಬಾಲಾ ಓ ಓ ಓ
ದೇವಕಿ ವರ ಬಾಲಾ ||
ಕಾವ ತಾಳ್ಮದ ಹನುಮನ ಕೂಡೀ, ಬಾರೋ ಸಿರಿಲೋಲಾ | ಓ ಓ ಓ
ಬಾರೋ ಸಿರಿಲೋಲಾ ||
ಸರ್ವಕು ನೀ ಮೂಲಾ | ಮದ್ಯಮೋಹಕೆ ನೀ ಕಾಲಾ || ೨ ||

೪೯. "ಬಿಂಕದ ಸಿಂಗಾರಿ" (ಕನ್ಯಾರತ್ನ) — ಎಂಬಂತೆ

ವಂದಿಪೆ ಶ್ರೀರಾಮಾ | ನಾ ವಂದಿಪೆ ಶ್ರೀ ರಾಮಾ ||
ಹೇ ರಘುವರನೇ | ಜಯ ಮುರಹರನೇ |
ಎನ್ನಯ್ಯ ಬಾರೋ ಮುಖ ತೋರೋ || ಪ ||

ವರಮೂರುತಿಯ | ಗುರು ನೀನಾಗಿ | ಚಿರಶಾಂತಿ ನೀಡಿ ಪೊರೆದೇ ||
ಪದ ನಂಬಿದೇ | ಮುದ ನೀಡು ನೀ |
ಮದ ಮೋಹ ಹರಿಸು ಸಿರಿ ರಾಮಾ || ೧ ||

ಸೀತಾ ಪತಿಯೇ | ಶಾಂತೀ ನಿಧಿಯೇ | ಮತಿನೀಡಿ ಪೊರೆಯೊ ಓ ರಾಮಾ||
ಭವ ಬಂಧ ಹರ | ಶಿವ ವಂದ್ಯ ವರ |
ಬಾ ದೇವ ರಾಮ ಗುಣ ಸೀಮಾ .......... || ೨ ||

ಅಜ್ಞಾನವನು | ನೀ ನೀಗುತಲಿ | ಸುಜ್ಞಾನ ನೀಡು ಹೇ ಪ್ರಭುವೇ ||
ತವ ಪಾದವನು | ನಾ ನಂಬಿಹೆನೋ |
ಪೊರೆ ತಾಳ್ಮದ್ಹನುಮ ಗುರುನಾಥ || ೩ ||

೫೦. [" ಆಶಾಗಾನಾ ಮೋಹನ " (ಕರುಣೆಯೇ ಕುಟುಂಬದ ಕಣ್ಣು) ಎಂಬಂತೆ.]
ಆಶಾಪಾಶ ಬಂಧನಾ । ದೋಷಾಭರಿತಾ ಜೀವನಾ ।
ಪರಿಹರಿಸೀ ಸಂತಯಿಸೀ । ಅನಂತ ಆನಂದ ನೀ ನೀಡೂ ‖ ಪ ‖
ತನುವದು ಕರ್ಮದ ನಿವಾಸಾ । ಮನವದು ಚಿಂತೆಯು ವಿಲಾಸಾ ।
ನೀಗಿಸು ನೀ ಭವಪಾಶಾ । ಈ ಕವಿದ ನಿರಾಶಾ ‖
ಸಂತೋಷ ನೀ ನೀಡು ಜ್ಞಾನೇಶ ‖ ೧ ‖
ಬೆಳಗಿಸು ಜ್ಞಾನದ ಪ್ರಕಾಶಾ । ತೆರೆಯಿಸು ಕಂಗಳ ಮಹೇಶಾ ।
ತೊರಯಿಸು ಮುಸುಕಿದ ದೋಷಾ । ಈ ಜನುಮದ ವೇಷಾ ‖
ಸಂತೋಷ ನೀ ನೀಡು ಪ್ರಾಣೇಶ ‖ ೨ ‖
ದುರ್ಜನ ಸಂಗವ ನೀದೂಡೂ । ಸಜ್ಜನ ಸಂಗವ ನೀ ನೀಡೂ ।
ತಾಳ್ಯದ ಹನುಮನೆ ನೋಡೂ । ಈ ಹೃದಯದಿ ಕೂಡೂ ‖
ಚಿರ ಭಕ್ತಿ ನೀ ನೀಡಿ ಕಾಪಾಡು ‖ ೩ ‖

೫೧. [" ಜಗದೀಶ ನಾಡುವಾ " (ರಾಮಾಂಜನೇಯ ಯುದ್ಧ)—ಎಂಬಂತೆ.]
ಗುರುದೇವದತ್ತನೆ ನಮಿಪೆ ಕಾಮಿತ ದಾತಾ । ಶ್ರೀಪಾದಾ....
ಜ್ಞಾನಾಂತರಂಗನೇ । ನಮಿಪೇ ಕಾಮಿತ ದಾತಾ ‖ ಪ ‖
ಅಜಹರಿಹರನಾ ರೂಪವ ಧರಿಸೀ ।
ಭಜಿಸುವ ಭಕ್ತರ ಹೃದಯದಿ ನೆಲಸೀ ‖
ರಾಜಿಪ ಶ್ರೀಗುರೂ ವಂದಿಪೇ ‖ ೧ ‖
ಕಾಮದ ಬಲೆಯೂ ದೇಹವ ಬಳಸೀ ।
ಕ್ರೋಧದ ಜ್ವಾಲೆ ದಹಿಸುತಲಿಹುದೂ ‖
ಕಾವುದು ದೇವನೇ ಸದ್ಗುರು....‖ ೨ ‖
ಸತ್ಯದ ದಾರಿಯ ತೋರುತ ಕರುಣಿಸು ।
ಚಿತ್ತದಿ ನಿನ್ನಯ ರೂಪವ ಹುದುಗಿಸೂ ‖
ತಾಳ್ಯದ ಹುನುಮನಾ ದೇವನೇ.... ‖ ೩ ‖

೫೨. ["ಎಚ್ಚರಿಕೇ, ಎಚ್ಚರಿಕೇ " (ಅಣ್ಣ ತಂಗಿ)—ಎಂಬಂತೆ.]
ಎಲೆ ಮನವೇ, ಎಲೆ ಮನವೇ ಚಲಿಸದಿರೂ ।
ನನ್ನದೂ 'ನಾ' ನೆಂಬ ಗುಣವ ನೀಗಿ ಬಾಳು ‖ ಎಲೆ.... ‖ ಪ ‖
ಮದವ ಮೋಹ ದೂರಮಾಡಿ, ನೀನು ಜೀವಿಸೂ ।
ಮೂಢಮತಿಯ ನೀಗಿಸೀ ಸತ್ಯ ಪಾಲಿಸೂ- ।
ಮಡಿ ಹುಡಿಯೆಲ್ಲಾ ಅಂತರದಿ ತೋರೂ ‖ ೧ ‖
ವರ ನಿನ್ನ ಕರ್ತವ್ಯ ಧೃಡವಾಗಿಸೂ ।
ಗುರುನುಡಿಯು ಚಿರಕಾಲ ಪರಿಪಾಲಿಸೂ ‖
ಪರಮ ತಾಳ್ಯದ ಹನುಮನ್ನ ಭಜಿಸೂ ‖ ೨ ‖

೫೩. "ದೋಣಿ ಸಾಗಲಿ ಮುಂದೆ ಹೋಗಲಿ" (ಮಿಸ್ ಲೀಲಾವತಿ) ಎಂಬಂತೆ

ದೇವ ಮಾರುತಿ ಮಂಗಳಾತ್ಮಕ ಧವಳ ಮಂದಿರ ವಾಸನೇ ।
ಜೀವದಾತ ಶ್ರೀ ರಂಗಧಾಮನ ಸೇವೆಮಾಡಿದ ದಾಸನೇ ॥ ಪ ॥
ಹೊನ್ನು ಮಣ್ಣು ಕಾಮ ಕ್ರೋಧ ಬಾಧಹರಿಸುವ ವೀರನೇ ।
ಹೆಣ್ಣುಮಾಯೆಯ ನೀಗಿ ಕಾಯುವ ಭಕ್ತ ಬಾಂಧವ ಧೀರನೇ ॥
ಕಣ್ಣು ಕಾಣದೆ ದಾರಿ ತೋರದೆ ನಿನ್ನ ನಂಬಿಹೆ ಶಕ್ತನೇ ।
ಸನ್ನುತಾಂಘ್ರಿ ಶ್ರೀರಾಮಚಂದ್ರನ ನಿರತ ಸ್ಮರಿಸುವ ಭಕ್ತನೇ ॥ ೧ ॥
ಪರಮಭಕ್ತಿಯ ಶಕ್ತಿರೂಪನೆ ಚಿನ್ಮಯಾತ್ಮಕ ಪಾದನೇ ।
ಹರುಷ ಕರುಣೆಯ ಸತ್‌ಸ್ವರೂಪನೆ ಮನ್ಮನಸ್ಸಿನ ನಾಥನೇ ॥
ಸಿರಿಯ ಒಡೆಯನ ನಿತ್ಯದೂತನೇ ಕರ್ಮಪಾಶ ವಿದೂರನೇ ।
ಚರಣಕೆರಗುವೆ ಮುಕ್ತಿದಾತನೆ ಜನ್ಮಮರಣವ ನೀಗಿಸೂ ॥ ೨ ॥
ರಾಮರಾಯನ ದಾಸನೇ ವರಭಕ್ತ ಪಾಳ್ಯದ ಸೋಮನೇ ।
ನೇಮನಿಷ್ಠೆಯ ಮೂರ್ತಿಯೇ ಪರಶಕ್ತಿರೂಪ ಶ್ರೀ ಭೀಮನೇ ॥
ರೋಮರೋಮದಿ ಶಿವನ ರೂಪವ ಧರಿಸಿ ಮೆರೆದ ಶ್ರೀ ಪರಮನೇ ।
ಪ್ರೇಮ ಕರುಣಾರಸವ ಚೆಲ್ಲುತ ಬಾರೋ ತಾಳ್ಯದ ಹನುಮನೇ ॥ ೩ ॥

೫೪. "ನೋಡು ಬಾ ನೋಡು ಬಾ ನಮ್ಮೂರಾ" (ಮಿಸ್ ಲೀಲಾವತಿ) ಎಂಬಂತೆ

ಓಡಿ ಬಾ, ಓಡಿ ಬಾ, ಹೇ ದೇವ ।
ಓಡಿ ಬಾ, ಓಡಿ ಬಾ, ಓಡಿ ಬಾ ಹೇ ದೇವ ॥ ಪ ॥
ಓಡಿ ಬಾ ! ಓಡಿ ಬಾ ! ಕಡುಪಾಪಾ ದೂಡು ಬಾ ಹೇ ದೇವ ॥ಅ.ಪ॥
ಸಂಗೀತ ರಾಗಗಳ ಅರಿತಿಲ್ಲಾ । ಗಮಕವಿದ್ಯೆಯನು ತಿಳಿದಿಲ್ಲ ॥
ಭಾವುಕನೂ, ಭಕ್ತನೂ ನಾನಲ್ಲಾ.... ।
ಭಯದಿಂದ ನಾ ಭಜಿಪೆ ಹೇ ದೇವಾ ॥ ೧ ॥
ಅಜ್ಞಾನ ಅರಿಯನ್ನು ಗುರೂ ನೀಗು ನೀ ।
ಸಜ್ಜನರ ಸಹವಾಸಾ ಪ್ರಭೂ ನೀಡು ನೀ.... ॥
ಸನ್ಮತಿಯ ಕೊಡು ನೀನು ಗುರು ಮಾರುತೀ.... ।
ಅನುರಾಗ ನೀ ತೋರಿ ಬಾ....ಬಾ....ಬಾ....ಬಾ ॥ ೨ ॥
ಸನ್ಮಾರ್ಗ ಎಂದೆಂದು ನೀ ತೋರುತಾ ।
ಎನ್ಮನದ ಪರಿತಾಪ ನೀ ನೀಗುತಾ ।
ಚಿನ್ಮಯನೇ ಹರಿ ಎನ್ನ ಭವಪಾಶವಾ.... ।
ಗುರು ತಾಳ್ಯಾದ್ಹನುಮಯ್ಯ ಬಾ....ಬಾ....ಬಾ ಬಾ ॥ ೩ ॥

**೫೫. “ ನಮೋ ಭೂತನಾಥ ” (ಸತ್ಯ ಹರಿಶ್ಚಂದ್ರ)—ಎಂಬಂತೆ.**

ನಮೋ ಪ್ರಾಣದಾತಾ । ನಮೋ ಜ್ಞಾನದೇವಾ ।
ನಮೋ ಶಕ್ತಿರೂಪಾ । ನಮೋ ಭಕ್ತಿದೀಪಾ ॥ ಪ ॥
ಬಹುರೂಪ ದೇವಾ । ಸದಾ ಚಿತ್‌ಸ್ವರೂಪಾ ।
ಗುಹಾ ವಂದ್ಯದೂತಾ । ಸದಾ ನಿರ್ವಿಕಲ್ಪಾ ॥
ಮಹಾ ಸಾಧಕಾ ವಂದಿಪೇ ಪಾಲಿಸಯ್ಯಾ ॥ ೧ ॥
ಪ್ರಭೂ ಸೇವೆಯಿಂದಾ । ಮಹಾ ಕೀರ್ತಿ ಗಳಿಸೀ ।
ವಿಭೂ ವಿಶ್ವದಲ್ಲೀ । ಬಹೂಮಾನ್ಯನಾದಾ ॥
ನಭೋ ಮಂಡಲಾ ಪೂಜ್ಯನೇ ಪಾಲಿಸಯ್ಯ ॥ ೨ ॥
ಪದಾಂಭೋಜಕೆರಗೀ । ಅಹೋ ರಾತ್ರಿ ತಣಿವೇ ।
ಚಿದಾನಂದ ನೀಡೋ । ಅನಾದಂತ್ಯ ದೇವಾ ॥
ಸದಾ ತಾಳ್ಯದಾ ಹನುಮನೇ ಪಾಲಿಸಯ್ಯಾ ॥ ೩ ॥

**೫೬. “ ನನ್ನ ನೀನೂ, ನಿನ್ನ ನಾನೂ ” (ಸತ್ಯ ಹರಿಶ್ಚಂದ್ರ) — ಎಂಬಂತೆ.**

ಜ್ಞಾನದಾತಾ । ರಾಮುದೂತಾ.... ।
ಪ್ರಾಣನಾಥಾ ನಿನ್ನ ಕಂಡೇ ॥ ಪ ॥

ಕಲ್ಲಾಗಿ ನಿಂತಂಥ ನಿನ್ನ ರೂಪಾ ।
ಎಲ್ಲೆಲ್ಲು ಹೊಳೆವುದನ್ನು ನಾನು ಕಂಡೇ ॥ ಅ. ಪ ॥

ದೇವಸ್ಥಾನದೊಳಗೆ ನಾನು ಓಡಿಬಂದೇ ।
ಕಣ್ಣ ಮುಚ್ಚಿ ಕೈಯ ಮುಗಿದು ನಿಂತುಕೊಂಡೇ ॥
ನಿನ್ನ ಮೂರ್ತಿಯನ್ನು ಕಂಡು ಕುಣಿದಾಡೀ ।
ನೋಡುತ್ತ, ಹಾಡುತ್ತ ನಾನು ನಲಿದೇ ॥ ೧ ॥

ಹೂವು ಹಣ್ಣು ನೈವೇದ್ಯ ಹಾಲು ತಂದೇ ।
ಧೂಪ ಹಾಕಿ ದೀಪ ಹಚ್ಚಿ ನಿಂತುಕೊಂಡೇ ॥
ಪೂಜೇಯ ಮಾಡುತ್ತ, ನಿನ್ನ ಭಜಿಸೀ ।
ಹಾಡುತ್ತ, ಬೇಡುತ್ತ, ನಾನು ನಲಿದೇ ॥ ೨ ॥

ಭಕ್ತಿಯಿಂದ ಧ್ಯಾನಗೈವ ಜನರ ಕಂಡೇ ।
ಧ್ಯಾನದಿಂದ ಶಾಂತಿ ಪಡೆವ ಅವರ ಕಂಡೇ ॥
ಪ್ರೇಮದಿಂದ ಎಲ್ಲರನ್ನು ಪೊರೆವಂಥ ।
ತಾಳ್ಯಾದ ಹನುಮಂತ ನಿನ್ನ ಕಂಡೇ ॥ ೩ ॥

೫೭. " ಆನಂದ ಸದನ, ಅರವಿಂದನಯನ " (ಸತ್ಯಹರಿಶ್ಚಂದ್ರ)—**ಎಂಬಂತೆ**

ಶ್ರೀರಾಮ ಚಂದ್ರಾ । ವರ ರಾಘವೇಂದ್ರಾ ।
ವೈದೇಹಿ ಹೃದಯೇಶ್ವರಾ .... ॥
ಶರಣೆಂಬೆ ಸುರ ಸುಂದರಾ । ಶರಣೆಂಬೆ ಸುರ ಸುಂದರಾ ॥ ಪ ॥
ಶಿಲೆಯಲ್ಲಿ ನೀನೂ, ಮಲೆಯಲ್ಲಿ ನೀನೂ ।
ಕಲೆಯಲ್ಲಿ ಪರಿಪೂರ್ಣನು .... ॥
ಒಲವಿಂದ ಭಜಿಪಾ, ಕುಲದಲ್ಲಿ ನೀನೂ .... ।
ನೆಲಸೀ, ನಲಿವೇ, ಪ್ರಭುರಾಮನೇ ॥
ಶರಣೆಂಬೆ ಸುರ ಸುಂದರಾ ॥ ೧ ॥
ಕನಸಲ್ಲಿ ಬಂದೆ । ಮನದಲ್ಲಿ ಬಂದೇ ।
ನನಸಲ್ಲಿ ನೀ ಬಾರೆಯಾ ........ ॥
ಈ ಜನ್ಮವನ್ನು ಪಾವನವಮಾಡೀ ।
ಹರಸೂ, ತಣಿಸೂ, ಪ್ರಭುರಾಘವಾ .... ॥
ಶರಣೆಂಬೆ ಸುರಸುಂದರಾ ॥ ೨ ।
ಕಿವಿಗಿಂಪು ನಿನ್ನ ವರ ನಾಮ ಭಜನೇ ।
ರವಿವಂಶ ಕುಲ ದೀಪನೇ ........ ॥
ವರ ತಾಳ್ಮದ ಹನುಮ । ಗುರುನಾಥ ರಾಮ ।
ಅಮರಾ, ಮಧುರಾ, ಕರುಣಾಕರಾ .... ॥
ಶರಣೆಂಬೆ ಸುರ ಸುಂದರಾ ॥ ೩ ॥

೫೮. " ನೀನು ನಮಗೆ ಸಿಕ್ಕಿ ಬಿದ್ದೆಯೋ ರಾಜಾ " (ಸತ್ಯಹರಿಚಂದ್ರ)–**ಎಂಬಂತೆ**

ನಾನು ನಿನ್ನ ಭಕ್ತನಾದೆನೋ ಸ್ವಾಮೀ ।
ನೀನು ಎನ್ನ ದೂಡ ಬೇಡವೋ ದೂರಾ। ಹೇ ದೇವಾ ॥ ಪ ॥
ಪಾಹೀ ವೇದಾಂತವೇದ್ಯ ಪಾಹೀ ।
ತ್ರಾಹೀ ನಾದಾಂತರಂಗ ತ್ರಾಹೀ ॥ **ಅ. ಪ ॥**
ಕಾಮ ಕ್ರೋಧಕೆ ತನುವು ಸಿಲುಕಲು । ಅದರ ಜ್ವಾಲೆಗೆ ಮನವು ದಹಿಸಲು ।
ತಾಳಲಾರದೇ ಕೂಗಿಕೊಂಡೆ ನಾ ನಿನ್ನಾ ........ ॥
ಕೂಗಿ ಕೂಗಿ ಭಕ್ತನಾದೆನೋ ದೇವ । ಹೇದೇವಾ ॥ ೧ ॥
ಭವದ ಪಾಶವು ಎನ್ನ ಬಳಸಲು । ಭಯದಿ ದೇಹವು ಸೊರಗಿ ಕೊರಗಲು ।
ಸಹಿಸಲಾರದೆ ಕೂಗಿ ಕೊಂಡೆನೋ ನಿನ್ನಾ ........ ॥
ಕೂಗಿ ಕೂಗಿ ಭಕ್ತನಾದೆ ನೋ ದೇವ । ಹೇದೇವಾ ॥ ೨ ॥
ದುಃಖ ಹರಿಸಲು ನಿನ್ನ ಬೇಡಿದೆ । ಸುಖವ ಬಯಸಿ ನಾ ಎನ್ನ ಕಾಡಿದೇ ।
ಸ್ವಾರ್ಥಕ್ಕಾಗಿ ನಾ ಭಕ್ತನಾದೆನೋ ನಿನ್ನಾ .... ॥
ಸತ್ಯ ಭಕ್ತಿಯ ನೀಡು ತಾಳ್ಮದಾ ಹನುಮಾ ॥ ಓ ಹನುಮಾ ॥ ೩ ।

೫೯. " ಏ ಮೇರಾ ಪ್ರೇಮ ಪತ್ರ ಪಡ್‌ಕರ್ " (ಸಂಗಂ) — ಎಂಬಂತೆ

[ಜನುಮ ವಾನರಾ । ಹನುಮಾವರಾ .... । ನೀ ಗುಣವಲ್ಲೀಸುರಾ ॥
ಶ್ರೀಮಂತ ನೀಸು ಭಕ್ತಿಯಾ | ಚಿರ ಸೇವೆಯಾ ಚಂದಿರಾ ॥ ]
ಹೇ ದೇವಾ ಪ್ರೇಮ ರೂಪ ಹನುಮಾ ।
ನೀ ತೋರೋ ಪರಮ ಪಾದವನ್ನೂ ॥
ನಾ ನಿನ್ನ ವಂದಿಸೂವೆ | ನೀ ಹರಿಸೂ ಬಂಧನವನು ॥ ಪ ||
ಗುರೂ ಹೇ ದೇವ ಜಗದೀಶ । ಪರೀ ಹರಿಸಯ್ಯ ಈ ದೋಷಾ |
ಸುರಾ ಹೇ ಕಾವ ಪರಮೇಶ | ಹರೀ ನೀ ಎನ್ನ ಭವ ಪಾಶಾ ॥
ಸಿರೀ ವರನಾ ಶ್ರೀ ಹರಿಯ ದೂತ । ಗುರುವೆ,
ಆಂಜನೇಯನೇ । ಆಂಜನೇಯನೇ ಆಂಜನೇಯನೇ ॥ ೧ ||
ಗುರೂ ವಂದೇ ಹೇ ಪರಮಾತ್ಮ | ಹರೀ ಶಿವ ನೀನೆ ಪರಬ್ರಹ್ಮ ||
ಸಿರೀ ವಾಣೀ ಶ್ರೀ ಶರ್ವಾಣಿ । ವರಾಗಣಪಾ ನೀ ಗುರುವಾಣಿ ॥
ಸುರಾ ರೂಪಾ ನೀ ಪ್ರಭುವೆ ಕಾಯೊ । ನಮಿಪೆ
ತಾಳ್ಯದ್ಘನು ಮನೇ । ತಾಳ್ಯಘ್ನುಮನೇ ತಾಳ್ಯದ್ಘನುಮನೆ ।। ೨ ||

೬೦. " ದೋಸ್ತ್ ದೋಸ್ ನಾರಹಾ " (ಸಂಗಂ) — ಎಂಬಂತೆ

ದೇವ ದೇವ ಮಾರುತೀ । ಜೀವ ರಥದ ಸಾರಥೀ ।
ವಂದಿಪೇ ಪ್ರಭೂವರಾ । ಕಾವುದೆನ್ನ ಶ್ರೀಗುರೋ ।
ಕಾವುದೆನ್ನ ಶ್ರೀಗುರೂ || ಪ ||
ಅಜ್ಞಾನ ದಿಂದು ನೊಂದುನಾ । ಅನಾದಿ ದೇವ ಬಂದಿಹೇ |
ಸುಜ್ಞಾನವನ್ನು ನೀಡಯಾ । ನೀ ನೀಡಯಾ ||
ಅಪೂರ್ವಕೀರ್ತಿ ಸಿಂಧುವೇ | ಅಪಾರ ಭಕ್ತಿ ಬಂಧುವೇ ।
ಸುಜ್ಞಾನವನ್ನು ನೀಡಯಾ । ನೀ ನೀಡಯಾ ||
ಅಂಧನಾದ ಎನ್ನಯ || ಕಣ್ಣು ತೆರೆಸು ಬಾರಯ್ಯಾ ।
ವಂದಿಪೇ ಪ್ರಭೂವರಾ । ಕಾವುದೆನ್ನ ಶ್ರೀಗರೂ ।
ಕಾವು ದೆನ್ನ ಶ್ರೀಗುರೂ ॥ ೧ ॥
ತನೂ ಮನಾ ಧನಾವನೂ । ಗುರಾ ವರಾ ನಾ ಅರ್ಪಿಪೇ ।
ಈ ಜನ್ಮ ಮರಣ ನೀಗಯ್ಯ । ನೀ ನೀಗಯ್ಯಾ ||
ಮನಸು ಮಾತು ದೇಹವಾ । ಪರಿಶುದ್ಧಗೊಳಿಸು ಹೇ ಗುರೋ ।
ಈ ಕರ್ಮ ಪಾಶ ಹರಿಸಯ್ಯ । ನೀಹರಿಸಯ್ಯ ||
ಅನಂತ ತಾಳ್ಯದ್ಘನುಮನೇ | ಅನಾಥ ನಾಥ ದೇವನೇ ।
ವಂದಿಪೇ ಪ್ರಭೂವರಾ । ಕಾವುದೆನ್ನ ಶ್ರೀಗುರೂ |
ಕಾವುದೆನ್ನ ಶ್ರೀ ಗುರೂ || ೨ ||

೬೦. " ತುಮ್ಹೀ ಹೋ ಮಾತಾ " (ಮೈ ಚುಪ್ ರಹೂಂಗಿ)—ಎಂಬಂತೆ

ಗುರು ದೇವ ದೇವ । ಪರಮಾತ್ಮ ಬಾರೋ ।
ಕರುಣಾಳು ಬ್ರಹ್ಮ । ಚೈತನ್ಯ ಬಾರೋ ॥ ಪ ॥
ಅಪರಾಧಿ ನಾನೂ । ಅರಿವಾಯಿತೆನೆಗೇ ।
ಅನುರೂಪ ನಿನ್ನಾ । ಚಿರ ಸೇವೆ ನೀಡೋ ।
ಅನಾದಿ ದೇವಾ । ಅನಂತ ರೂಪಾ-।
ಕರುಣಾಳು ಬ್ರಹ್ಮ । ಚೈತನ್ಯ ಬಾರೋ ॥ ೧ ॥
ಅಜ್ಞಾನದಿಂದಾ । ಅನುಗಾಲ ಬಳಲೀ ।
ಅನುತಾಪ ಪಡುತಾ । ಕೊರಗೂತ್ತಲಿರುವೇ ॥
ಅರಿಯನ್ನು ದೂಡೀ । ಅರಿವನ್ನು ನೀಡೀ ।
ಕರುಣಾಳು ಬ್ರಹ್ಮ । ಚೈತನ್ಯ ಬಾರೋ ॥ ೨ ॥
ತವ ಪಾದ ಸೇವಾ । ಚಿರಕಾಲ ಗೈವೇ ।
ತ್ರಯ ತಾಪ ಹರಿಸೀ । ಗುರು ದೇವ ಕಾಯೋ ॥
ಗುರು ತಾಳ್ಯದ್ಧನುಮಾ । ಪರಿಪೂರ್ಣ ರಾಮಾ ।
ಕರುಣಾಳು ಬ್ರಹ್ಮ ಚೈತನ್ಯ ಬಾರೋ ॥ ೩ ॥

೬೨. " ಬಲುಮಾ, ಮಾನೆನಾ " (ಅಪೆರಾಹೌಸ್) ಎಂಬಂತೆ

ಹನುಮಾ । ದೇವನೇ ॥
ಭಾವ ಭಕುತಿಯನೂ । ದೇವನಾನರಿಯೇ । ಪ್ರಭು
ಪಾಹಿ ಮಹೇಶ ಗುರು ದೇವಾ ನಮೋ ॥ ಪ ॥
ಜಯ ಜಯ ಎನುತಾ । ಗುರುವರ ನಮಿಪೇ ।
ಭಯವನು ನೀಗೀ । ಕರುಣಿಸು ಎನಿಪೇ ॥
ಮಾಯೆಯನೂ । ನೀ ನೀಗಿಸು ದೇವಾ ।
ಜಯತು ಜಯ ಜಗದೀಶಾ ನಮೋ — ॥ ೧ ॥
ಮಾರುತಿ ದೇವಾ । ಬೇಗನೇ ಬಾರೋ ।
ಪರಮ ಪೂಜ್ಯಾ ಪಾದವ ತೋರೋ ॥
ಮಾರಾಕಾರ ಸುರಾವರರೂಪಾ ।
ಸುರನೆ ತೋರಿ ಗುರು ಪಾಲೀಸಯ್ಯ ॥ ೨ ॥
ತಾರಕ ನಾಮಾ ಪ್ರೇಮದಿ ಅರುಹೀ ।
ತಾಪವ ನೀಗೀ ದುಗುಡವ ಹರಿಸೋ
ತಾಮಸ ಮತಿಯ ನೀ ನೀಗೀಸು ದೇವಾ ।
ತಾಳ್ಯದ್ಧನುಮ ಗುರು ದೇವಾ ನಮೋ ॥ ೩ ॥

೬೩. "ಸುಖ ಸೌಭಾಗ್ಯವೆಲ್ಲಾ ನಮದಾಗಿದೆ"(ಕವಲೆರಡು ಕುಲಒಂದು) ಎಂಬಂತೆ

ಸುಖ ಸಂತೋಷ ಕೊಡುವಾ ಗುರು ಮಂದಿರಾ ।
ಪುಣ್ಯ ಪುರುಷ ಗುರು ದೇವ ತಾನಿರುವಾ ॥ ಗ ॥
ಅವನದೆ ಪೂಜೆ ಗುಡಿಯಲ್ಲೀ ।
ಅವನದೆ ರೂಪಾ ಶಿಲೆಯಲ್ಲೀ ॥
ಅವನದೆ ಧ್ಯಾನಾ ಮನದಲ್ಲೀ ।
ಅವನದೆ ನಾಮಾ ಹಾಡಲ್ಲೀ ॥
ಇಂತು ಮಾಳ್ಪ ಗುರೂ ಭಕ್ತರಿಹರಲ್ಲೀ ॥ ೧ ॥
ಗುರುವೆ ಅವರ ಸೌಭಾಗ್ಯ ।
ಜಪವೇ ಅವರ ಐಶ್ವರ್ಯ ॥
ಭಜನೇ ಅವರ ಸಂಗೀತ ।
ಸುಜನರ ಸೇವೇ ಸಂತೋಷ ॥
ಅದು ಸ್ವರ್ಗ ಅದೇ ಅವರ ಆಧಾರ ॥ ೨ ॥
ಗುರುವಿನ ಪಾದಾ ನೋಡಲ್ಲೀ ।
ಪರತರ ಪೂಜೇ ಮಾಡಲ್ಲೀ ॥
ತಾರಕ ಮಂತ್ರ ಪಡೆಯಲ್ಲೀ ।
ತಾಳ್ಯದ ಹನುಮ ನಿಹನಲ್ಲೀ ॥
ಅಲ್ಲಿ ಪೊರೆವ ಗುರೂ ಬ್ರಹ್ಮ ಚೈತನ್ಯಾ ॥ ೩ ॥

೬೪. " ಅನ್ಯತಕ್ರೊ ತಾರುಚಿ " (ಸಂತ ತುಕಾರಾಂ) —ಎಂಬಂತೆ

ಕಲ್ಲಿನಿಂದ ಮಾಡಿದ ಪಾದವನ್ನು ಕಾಣೂ ।
ಪಾದವನ್ನು ಕಾಣೂ ॥ ಪ ॥
ಗುರುವೂ, ಅಪಾದದಲ್ಲಿ । ಇಹನೂ ತಾನೂ ।
ಇಹನು ತಾನೂ ॥ ಅ. ಪ ॥
ದೇವ ಬ್ರಹ್ಮ ಚೈತನ್ಯ । ಸರ್ವಲೋಕಮಾನ್ಯ ।
ಭವ್ಯ ರಾಮ ಸೇವೆಯಲೀ — । ಆದಾ ಧನ್ಯ । ಆದಾ ಧನ್ಯ ॥ ೧ ॥
ಪಾದವನ್ನು ಸುತ್ತಿದ । ಸರ್ಪಹೆಡೆ ಎತ್ತಿದೆ ।
ಭಕ್ತಿವಂತ ಗುಂಪಿಗೇ .... । ಅಭಯ ತೋರೀ । ಅಭಯ ತೋರೀ ॥೨॥
ಗುರು ತಾಳ್ಯದ್ಹನುಮನಾ ವರರೂಪನಾ ಪಾದಾ ।
ಚಿರಶಾಂತಿ ಕೊಡುವಾ । ಪರಮಾ ಪಾದಾ । ಪರಮಾ ಪಾದಾ ॥ ೩ ॥

೬೫. "ಕನಸಿನ ದೇವಿಯಾಗಿ" (ಪ್ರತಿಜ್ಞೆ)—ಎಂಬಂತೆ.

ಗುರುವಿನಾ ಪಾದ ನೋಡು । ಮುದದಲೀ ಪೂಜೆಮಾಡು ।
ಮಂದಿರಾ । ದಲ್ಲಿ ನಿಂತ ಗುರುವಾ ವಂದಿಸೂ ।
ಗುರುವಾ ವಂದಿಸೂ ॥ ಪ ॥

ಸಿರಿಯುವರನಾ ಪೂಜೆಮಾಡಿ । ಪರಮ ಜ್ಞಾನ ಬೆಳಕನೀಡೀ ।
ನಿರತ ಕರುಣಾ ಹರುಷ ಬೀರೀ । ಪೊರೆವ ಪಾದವೂ ।
ಪೊರೆವ ಪಾದವೂ ॥ ೧ ॥

ಸರ್ಪಭೂಷನಾಗಿ ಮೆರೆವಾ । ಕಪ್ಪುಶಿಲೆಯಾ ದಿವ್ಯಪಾದಾ ।
ತಪ್ಪುಗಳನು ಕ್ಷಮಿಸುವಂಥ । ಪರಮಪಾದವೂ ॥
ಭಕ್ತಿಭರಿತ ಜ್ಯೋತಿಯೂ । ಶಕ್ತಿರೂಪ ಕೀರ್ತಿಯೂ ।
ಮುಕ್ತಿಯನ್ನು ನೀಡಿ ಪೊರೆವ । ಪರಮಪಾದವೂ । ಪರಮಪಾದವೂ ॥೨॥

ಗುರುವೆ ನಮ್ಮ ತಾಯಿ ತಂದೇ । ಗುರುವೆ ನಮ್ಮ ಬಂಧು ಬಳಗಾ ।
ಗುರುವೆ ನಮ್ಮ ಜ್ಞಾನಶಕ್ತೀ । ಜೀವದಾತ ಮೂರುತೀ ॥
ಆತ್ಮರೂಪಿ ದೇವದೇವ । ಸ್ವಾರ್ಥರಹಿತ ಜ್ಞಾನಭಾವಾ ।
ತಾಳ್ಯದ್ದನುಮರೂಪ ಗುರುವ । ಭವ್ಯಪಾದವೂ । ಭವ್ಯಪಾದವೂ ॥೩॥

೬೬. "ಇವಳು ಯಾರು ಬಲ್ಲೆಯೇನೂ" (ಗೌರಿ)—ಎಂಬಂತೆ,

ಇವನು ಯಾರು ಬಲ್ಲೆಯೇನೂ । ಇವನ ಮಹಿಮೆ ಹೇಳಲೇನೂ ।
ಇವನ ರೂಪ ನೋಡು ನೀನೂ ।
ಇವನು ನಮ್ಮಯಾ । ಸ್ವಾಮಿದೇವ ಹನುಮನು ॥ ಪ ॥

ಎಡದ ಹಸ್ತ ಸೇವೆಯನೂ । ಬಲದ ಹಸ್ತ ಅಭಯುವನೂ ।
ಇಂತು ತೋರ್ವ ಪರಮಗುರೋ ॥ ರಾಮಚಂದ್ರನಾ
ಹೃದಯದಲ್ಲಿ ಪಡೆದಿಹ । ಹೃದಯದಲ್ಲಿ ಪಡೆದಿಹ ॥ ೧ ॥

ಅಂಗಾಲಿನ ಪಾದಧೂಳಿ । ಭಂಗಾರವು ನಮಗೆ ಕೇಳಿ ।
ಕಂಗಳ ಭಕ್ತಿಯಲಿ ತಾನೂ । ಕರೆವ ರಾಮನಾ.... ।
ತನ್ನ ಪರಮ ರಾಮನಾ ॥ ೨ ॥

ಗುಣವಂತನು । ಶೌರ್ಯಧಾಮ ॥ ಧೀಮಂತನು ತಾಳ್ಯದ್ದನುಮ ।
ವರ ಭಕುತರ ಹೃದಯದೊಳಗೇ.... ।
ಇವನು ಮೆರೆಯುತಿರುವನು । ನಮ್ಮ ಸಲಹುತಿರುವನು ॥ ೩ ॥

೬೭. " ಸಿಟ್ಯಾಕೆ ಸಿಡುಕ್ಯಾಕೆ ನನ್ನ ಜಾಣ " (ವೀರಸಂಕಲ್ಪ)—ಎಂಬಂತೆ.

ಎಲ್ಲಯ್ಯ ಅಡಗಿರುವೆ ಸಂಜೀವಾ ।
ಮುನಿಸೇಕೆ ಎನ್ನಲ್ಲಿ ಹೇ ದೇವಾ ॥
ತಪ್ಪನ್ನು ಕ್ಷಮಿಸೀ । ಒಪ್ಪಾಗಿ ನಡೆಸೀ ।
ಕರುಣಾಳು ಬಾರಯ್ಯ ಮನ ಒಲಿಸೀ ॥ ಪ ॥

ತಂದಾನ ತಾನತ್ತನ್ನಾ । ತೈಯತಾನತ್ತಂದಾನ ತಾತನ್ನ ॥ ಅ. ಪ ॥
ಅನುದಿನವು ನಾ ಕಾದೆ ನಿನಗಾಗೀ ।
ಕನವರಿಪೆ ಬಾರಯ್ಯ ಗುರುವಾಗೀ ॥
ಹನುಮಯ್ಯ ಬಂದು । ಮನದಲ್ಲಿ ನಿಂದು ।
ಹರಸಯ್ಯ ಎನ್ನನ್ನು ಹೇ ಬಂಧು ॥ ೧ ॥

ಲಂಕೇಯ ಸುಟ್ಟ ಹನುಮಯ್ಯ ।
ಸಂಕಟ ಹರಿವ ಎನ್ನಯ್ಯ ॥
ಭಯುವನ್ನು ನೀಗೀ । ದಯುವನ್ನು ತೋರೋ ॥
ಜಯುವೆಂಬೆ ಗುರುವರ್ಯ ನೀ ಬಾರೋ ॥ ೨ ॥

ಶ್ರೀರಾಮ ದಾಸಾ ಬಾರಯ್ಯ ।
ನೀ ಕಾಮ ಕ್ರೋಧಾ ಅಳಿಸಯ್ಯ ॥
ತಾಳ್ಯಾದ ಹನುಮಾ । ತೋರಯ್ಯ ಪ್ರೇಮಾ ।
ತವ ಪಾದ ನೀ ತೋರು ಗುಣಧಾಮಾ ॥ ೩ ॥

೬೮. " ಯಾರಲ್ಲು ಹೇಳಬೇಡ " (ಕವಲೆರಡು ಕುಲ ಒಂದು)—ಎಂಬಂತೆ

ನೋಡಯ್ಯ ದೇವನನ್ನು । ಮಾಡಯ್ಯ ಸೇವೆಯನ್ನು ।
ಪಾಡು ಅವನ ನಾಮವನ್ನು । ಬೇಡು ಅಚಲ ಭಕ್ತಿಯನ್ನು ॥
ಬಾರಯ್ಯ ನೀನೂ । ಕೇಳಯ್ಯ ನೀನೂ ॥ ಪ ॥

ಕಳ್ಳತನವ ಮಾಡಬೇಡ । ಸುಳ್ಳು ಮಾತು ಆಡಬೇಡ ।
ಒಳ್ಳೆಹಾದಿಯಲ್ಲಿ ನಡೆದು । ಗುಣವಂತನಾಗಿ ಬಾಳು ॥
ಬಾರಯ್ಯ ನೀನೂ । ಕೇಳಯ್ಯ ನೀನೂ ॥ ೧ ॥

ಭೀತಿಯನ್ನು ಪಡೆಯಬೇಡ । ಪ್ರೀತಿ ಮಾರ್ಗ ಮರೆಯಾಬೇಡ ।
ನೀತಿಯಿಂದ ನೀನು ನಡೆದು । ಕೀರ್ತಿವಂತನಾಗಿ ಬಾಳು ॥
ಬಾರಯ್ಯ ನೀನೂ । ಕೇಳಯ್ಯ ನೀನೂ ॥ ೨ ॥

ಧರ್ಮ ಮಾರ್ಗ ಹಿಡಿಯಬೇಕೂ । ಕರ್ಮವನ್ನು ಕಳೆಯಬೇಕು !
ಜನ್ಮ ಮರಣ ನೀಗುವಂಥ । ಮರ್ಮವನ್ನು ಅರಿಯಬೇಕು ॥
ಬಾರಯ್ಯ ನೀನೂ । ಕೇಳಯ್ಯ ನೀನೂ ॥ ೩ ॥

ಸತ್ಯ ಹಾದಿ ಹಿಡಿಯಬೇಕು । ಮಿಥ್ಯವನ್ನು ತುಳಿಯಬೇಕು ।
ನಿತ್ಯ ತಾಳ್ಯದ್ಹನುಮನ ಪೂಜೆ । ಭೃತ್ಯನಾಗಿ ಮಾಡಬೇಕು ॥
ಬಾರಯ್ಯ ನೀನೂ ! ಕೇಳಯ್ಯ ನೀನೂ ॥ ೪ ॥

೬೯. "ನೈನಾಬರಸೇ ರಿಂ ಝಿಂ ರಿಂ ಝಿಂ" (ವೋಕೌನ್‌ಥೀ)–ಎಂಬಂತೆ.

ದೇವಾ ಹನುಮಾ । ಬಾರೋ ಬಾರೋ ।
ಎನ್ನ ಸ್ವಾಮೀ ಗುರುನಾಥ ಬಾ ॥ ಪ ॥
ನಾ ನಿನಗಾಗಿ [illegible] । ನೀ ಏಕೆ ದೂರ ಮರೆಯಾದೇ.... ।
ನೀ ಬಾರೋ ಸ್ವಾಮಿ ಭರದಲ್ಲ । ಪ್ರಭೂ ನೆಲಸಯ್ಯ ಮನದಲ್ಲಿ ॥
ಸ್ವಾಮೀ ಸ್ವಾಮೀ ಎಂದೂ । ಹಗಲೂ ರಾತ್ರಿ ಕರೆವೆ ।
ಪ್ರೇಮಾದಿಂದ ಸ್ವಾಮೀ ಓಡಿ ಬಾ ॥ ೧ ॥
ನಾ ಕೊಡಲಾರೇ ನಗಾನಾಣ್ಯ । ನಾ ಹಾಡಾಲಾರೆ ವರಗಾನಾ ॥
ನಾ ಬೇಡೋದಿಲ್ಲ ಧನಧಾನ್ಯ । ಸದಾ ಕೊಡು ನಿನ್ನ ವರಧ್ಯಾನಾ ॥
ಕಾಮ ಕ್ರೋಧಾ ಅಳಿಸು । ನೇಮ ನೀತಿ ಇರಿಸು ।
ಪ್ರೇಮಾದಿಂದ ನೋಡು ಸ್ವಾಮಿಯೇ ॥ ೨ ॥
ನಾ ಪಡೆದಿಲ್ಲಾ ವರಾಜ್ಞಾನ । ನಾ ಮಾಡಾಲಾರೆ ತಪವನ್ನು ।
ನಾ ತಾಳಾಲಾರೆ ತಡವನ್ನು । ಗುರೂ ತೊರೆ ನಿನ್ನ ಚಿರಮೌನ ॥
ಕಾಡೀ ಬೇಡೀ ಕರವೆ । ಕನಲೀ ಬಳಲೀ ಮೊರೆವೆ ।
ತಾಳ್ಮಾದ್ಹನುಮ ಸ್ವಾಮಿ ಓಡಿ ಬಾ ॥ ೩ ॥

೭೦. "ಬೋಲ್ ಮೇರೀ ತಕದೀರ್ ಮೆ ಕ್ಯಾಹೈ" (ಹರಿ ಗಾಲೀ ಔರ್ ರಾಸ್ತಾ) ಎಂಬಂತೆ.

ದೇವ ನಮೋ ಗುರು ಪಾಲಿಸು ಪ್ರಭುವೇ ।
ದಯಾ ಮೂರುತಿ ಜೀವ ವರಾ.... ॥
ಜೀವನ ನೌಕೆಯು ದಾಟಿಸುವಾ । ಕರುಣಾಳು ಹೇ ಮಾರುತೀ ॥ಪ॥
ದಾರಿ ಕಾಣದೇ ಬಳಲೂತ್ತಲಿರುವೇ ।
ದಯಾ ಮೂರುತೀ ಜೀವವರಾ ।
ದಾರಿಯು ತೋರೀ ಪಾಲಿಸು ನೀ । ಕರುಣಾಳೂ ಹೇ ಮಾರುತೀ ॥
॥ ಅ. ಪ ॥

ಭಯನಾಶಕ ಜೀವ [illegible] । ದಯಾಮಯ ದೇವ ನೀನಯ್ಯ ।
[illegible] ಪ್ರಭೂ ದೇವ ನಿನದಯ್ಯ ॥
[illegible] । ದಯಾಮೂರುತಿ ಜೀವನರಾ ।
ಜೀವನನೌಕೆಯು ದಾಟಿಸುವ । ಕರುಣಾಳೂ ಹೇ ಮಾರುತೀ ॥ ೧ ॥
ಪರಾಶರ ಬ್ರಹ್ಮಚೈತನ್ಯ । ಪುರಂದರರೂಪ ಜಗಮಾನ್ಯ ।
ಗುರೂವರನೇ, ಹರೀಶನೇ । ಸುರಾಸುರವಂದ್ಯ ದೇವ ನಮೋ ॥
ತಾರಕಪ್ರಿಯ ಗುರು ತಾಳ್ಯದ ಹನುಮ । ದಯಾಮೂರುತಿ ಜೀವವರಾ ।
ಜೀವನನೌಕೆಯ ದಾಟಿಸುವ । ಕರುಣಾಳೂ ಹೇ ಮಾರುತೀ ॥ ೨ ॥

೭೧. "ಬದುಕಿದೆನೋ ಬದುಕಿದೆನೋ" (ಭಕ್ತ ಕನಕದಾಸ) — ಎಂಬಂತೆ.

ಭಜಿಸಿದೆನೋ | ಭಜಿಸಿದೆನೊ | ಭಯ ಭಕುತಿ ಇಂದಲೀ |
ಬ್ರಹ್ಮ ಚೈತನ್ಯ ಗುರು ಕೃಪೆಯು | ಎನಗಾಯಿತೋ ||
ಗುರುತೀರ್ಥ ಪ್ರಸಾದ ಜಿಹ್ವೆಗೆ ದೊರಕಿತೋ |
ಗುರುನಾಮಾಮೃತವು ಕಿವಿಗೊದಗಿತೋ ||
ಗುರುಭಕ್ತರುಗಳೆನ್ನ ಬಂಧುಗಳಾದರೋ |
ಗುರುಗಳಾಪಾದ ಎನಗಾನಂದ ನೀಡಿತೋ || ೧ ||
ಭಕ್ತಿಮಂದಿರದೊಳಗೆ ಚೈತನ್ಯಗುರು ಕುಲವು |
ಚಿತ್ತಶುದ್ಧತೆಯಿಂದ ಭಜನೆಗೈಯುತಲಿರಲು ||
ಸತ್ಯಮಾರ್ಗವತೋರಿ ಗುರುರಾಯ ಪೊರೆದಾ |
ಮತ್ತೊಮ್ಮೆ ಬಳಿ ಬಂದು ಅಭಯನೀಡಿದ ಗುರುವೂ || ೨ ||
ಇಂದವನ ಕಾರುಣ್ಯ ಪರಮಹರುಷವದಾಯ್ತು |
ಮುಂದೆನ್ನ ಜೀವನಕೆ ದಾರಿದೀವಿಗೆಯಾಯ್ತು||
ತಂದೆ ವರಾ ತಾಳ್ಯದಾ ಹನುಮದೇವನು ತಾನೂ |
ಬಂದೆನ್ನ ಜೀವನದ ಗುರಿ ತೋರಿ ಕಾಯ್ದ || ೩ ||

೭೨. "ಸಿಂಗಾರಶೀಲಾ, ಸಂಗೀತಲೋಲಾ" (ಭಕ್ತ ಕನಕದಾಸ)—ಎಂಬಂತೆ.

ಜ್ಞಾನೇಶದೇವಾ | ಸಂತೋಷಭಾವಾ |
ಆನಂದದಿಂದ ನಿನ್ನ ನಾನು ಪಾಡಿ ಧನ್ಯನಾಗುವೇ || ಪ ||
ಹರಿಸು ಅಜ್ಞಾನ ಹೇ ದೇವದೇವಾ |
ಭರದಿ ನೀನೀಡು ಜ್ಞಾನಾಂತ ಭಾವಾ |
ಸುರನೇ, ಪರನೇ, ಹರಿಸೆನ್ನಮಾಯಾ |
ಶ್ರೀರಾಮ ದಾಸ ನಿನ್ನ ಬೇಡುವೆ ನಾ ತಂದಯೇ || ೧ ||
ಭವದ ಗಾಡಾಂಧಕಾರಕೆ ದೀಪಾ |
ಭವ್ಯ ಶ್ರೀರಾಮಭಕ್ತಿ ಪ್ರದೀಪಾ ||
ಭುವಿಗೇ, ದಿವಿಗೇ, ಭಕ್ತಿಯ ಭೂಪಾ |
ಹೇ ವಾಯುಕಂದ ನೀಡು ಅಚಲಭಕ್ತಿ ನಿನ್ನೊಳು|| ೨ ||
ಪರಮಕಾರುಣ್ಯ ಸೌಜನ್ಯದೇವಾ |
ಜನುಮ ಸಾಫಲ್ಯ ನೀ ಮಾಡು ಜೀಯಾ ||
ಪ್ರಭುವೇ, ವಿಭುವೇ, ತಾಳ್ಯದ ಹನುಮಾ |
ಪ್ರಾಣೇಶ ನಿನ್ನ ಕೃಪೆಯ ಭಿಕ್ಷೆನೀಡಿ ಪಾಲಿಸೋ || ೩ ||

೭೩. “ ಬಾ ತಾಯಿ ಭಾರತಿಯೇ ” (ತಾಯಿ ಕರುಳು)—ಎಂಬಂತೆ.

ಬಾ ದೇವ ಮಾರುತಿಯೇ । ಬಾರೊ ನೀ ಧೀಮತಿಯೇ ।
ಭರಿತ ಪ್ರೇಮದ ಕರುಣಾ । ಭರದಿ ಬೀರುತ ಬಾರೈ ॥ ಪ ॥
ಮನ್ಮನದ ಮಂದಿರದಿ ಕಳಶವಿಟ್ಟೊ ।
ನಿನ್ನ ಚಿರರೂಪವನೂ ಅದರಲಿಟ್ಟೊ ॥
ತನ್ಮಯತೆ ತುಂಬಿದಾ ಭಕುತಿ ಕೊಟ್ಟೊ ।
ಚಿನ್ಮಯನೆ ಬಾ ಗುರುವೆ ಕರುಣೆ ಇಟ್ಟೊ ॥ ೧ ॥
ದೇವಾದಿದೇವವರ ಕಾದಿರುವೆ ನಾ ।
ಜೀವಾಂತರಂಗದೀ ನೊಂದಿರುವೆ ನಾ ॥
ಭವತಾಪ ನೀಗಿಸುತ ದಾರಿ ತೋರೈ ।
ಶಿವರೂಪ ತಾಳ್ಯದಾ ಹನುಮ ಬಾರೈ ॥ ೨ ॥

೭೪. “ ಬಾಳೊಂದುನಂದನಾ ” (ಜೇನುಗೂಡು)—ಎಂಬಂತೆ.

ಶ್ರೀಶೈಲವಾಸನೇ । ಪರಮೇಶ ವಂದಿಪೇ ।
ಭವತಾಪದ ಭಯ ನೀಗಿಸು ಶಿವನೇ ॥ ಪ ॥
ಅಜ್ಞಾನದಿಂದ ನಾನು । ಅನುಗಾಲ ಬೆಂದು ದಣಿದು ।
ಅನುತಾಪದಿ ನಾ ಮುಳುಗಿಹೇ ಜಗದೀಶ ಶಂಕರಾ.... ।
ಹೇ ಮಲ್ಲಿಕಾರ್ಜುನಾ ॥ ೧ ॥
ನಟರಾಜದೇವ ನಿನಗೆ । ಜಗವೊಂದು ನಾಟ್ಯರಂಗ ।
ಜಗಪಾಲನೆ ಪರಮೇಶನೆ । ಚಿರಶಾಂತಿ ನೀಡೆಯಾ ॥
ಹೇ ಮಲ್ಲಿಕಾರ್ಜುನಾ.... ॥ ೨ ॥
ತವಪಾದಪದ್ಮದಲ್ಲಿ । ಶಿರವಿಟ್ಟು ಧ್ಯಾನಗೈವೇ ।
ತಮಸಾಗ್ನಿಯ ಶಮಗೊಳಿಸುನಿ ಶ್ರೀ ತಾಳ್ಯದ್ಹನುಮನೇ ॥
ಹೇ ಮಲ್ಲಿಕಾರ್ಜುನಾ.... ॥ ೩ ॥

೭೫. “ ಈ ನನ್ನ ತೌರೂಮನೆಯಾ ” (ಸಂತ ತುಕಾರಾಂ)—ಎಂಬಂತೆ.

ಬಾರೆನ್ನ ದೇವಾ ಹನುಮಾ ।
ತೊರಯ್ಯ ನಿಜರೂಪ ನಿನ್ನಾ ॥ ಪ ॥
ಭೀಮಾ ಗುಣಧಾಮಾ ಎಂದೂ । ಪ್ರೇಮದಿಂದ ಕೂಗುವೆ ನಿನ್ನಾ ॥ ೧ ॥
ಹರಿಸಯ್ಯ ಅಜ್ಞಾನ ಭ್ರಾಂತೀ । ಇರಿಸೋ ಕಂಗಳಲಿ ಭಕ್ತೀ ॥ ೨ ॥
ಗುರುದೇವ ತಾಳ್ಯಾದ್ಹನುಮಾ । ಚಿರಶಾಂತಿಯನ್ನು ನೀ ನೀಡೈ ॥
ಚಿರಶಾಂತಿಯನ್ನು ನೀ ನೀಡೈ ॥ ೩ ॥

೭೬. " ಚೆಲುವಾಂತ ಚೆನ್ನಿಗನೆ " (ಅಮರಶಿಲ್ಪಿ ಜಕಣಾಚಾರಿ) ಎಂಬಂತೆ

ಗುರುದೇವ ವಂದಿಸುವೆ ಕೃಪೆಮಾಡಿ ಬಾ । ನೀ
ಚಿರ ಮೌನ ತೊರೆಯುತಲಿ ದಯಮಾಡಿ ಬಾ .... ರಾ .... ॥ ಪ ॥
ತ್ಯಾಗ ಶೀಲಗಳು ಎನ್ನೊಳಗಿಲ್ಲಾ ।
ಯಾಗ ಯಜ್ಞಗಳು ತಿಳಿಯೆನೋ ಸ್ವಾಮೀ ॥
ರಾಗ ತಾಳಗಳ ಅರಿಯೆನೊ ನಾನೂ ।
ಕೂಗುವೆ, ಆಲಿಸಿ ನೀಬಾರೋ ॥ ೧ ॥
ಘೋರ ಕತ್ತಲೆ ಮನದೊಳು ಕವಿದೂ ।
ದಾರಿ ಕಾಣದೆ ಕೊರಗುತ್ತಲಿರುವೇ ॥
ತಾರಕ ನಾಮದ ಜ್ಯೋತಿಯಾ ಬೆಳಗಿ ।
ವಾರಿಜ ನೇತ್ರನೆ ದಯ ತೋರೋ ॥ ೨ ॥
ಭಾವ ಭಕ್ತಿಯನು ಹೃದಯದಿ ತುಂಬಿ ।
ನೋವಿನ ಪಂಜರ ಹರಿಯುತ ಬಾರೋ ॥
ಕಾವ ತಾಳ್ಮದ ಹನುಮನೆ ನಮಿಪೇ ।
ಭಾವುಕ ನಿನ್ನಯ ಕೃಪೆ ತೋರೋ ॥ ೩ ॥

೭೭. " ಶರಣು ಕಾವೇರಿ ತಾಯೇ " (ಕಣ್ತೆರೆದು ನೋಡೂ) —'ಎಂಬಂತೆ.

ಶರಣು ಚೈತನ್ಯ ದೇವಾ । ಪ್ರಭುವೇ ।
ಗುರು ದೇವ ತಾಪವಿದೂರಾ .... । ವಿಭುವೇ ॥ ಪ ॥
[ ಜಯ ಜಯ ಜಯ ವಾಯು ಸುತಾ । ಭವ ಭಯಹರ ದೇವನುತ।
ಸುಂದರ ಚಂದಿರ ಜ್ಞಾನಗುರೋ । ಸುರವರ ದೇವ ನಮೋ ॥]
ಗೀತಾ ಪುತ್ರವರಾ । ಯಮುನಾನಾಥ ।
ಗುರುವೇ ನೀ ಬಂದೂ ಮಾಯೆಯ ನೀಗೂ ॥
ಹರಿಸೂ ಆಶೆಯಾ । ಪಾಶವಾ ನೀನೂ ।
ಹರಸೂ, ಎನ್ನಾ, ಗುರು ಚೈತನ್ಯ ॥ ಪ್ರಭುವೆ
ಗುರುದೇವ ತಾಪವಿದೂರಾ । ವಿಭುವೆ ॥ ೧ ॥
ಭವದಾ ಬಂಧನದೀ । ನೊಂದಿತು ದೇಹಾ ।
ಭಯದಾ ಬೇಗೆಯಲೀ । ಬೆಂದಿತು ಜೀವಾ ॥
ಭರದೀ ಬಾರೋ । ತಾಳ್ಮದಾ – ಹನುಮಾ ।
ಹರಸು, ಎನ್ನಾ, ಗುರು ಚೈತನ್ಯ । ಪ್ರಭುವೇ ।
ಗುರುದೇವ ತಾಪವಿದೂರಾ । ವಿಭುವೇ ॥ ೨ ॥

೭೮. "ಮೀರಿ ಮೀರಿ ಬಾ ತೊಂಸೆ" (ಖೈದಿನಂ. 911)—ಎಂಬಂತೆ

ಜಯ ಜಯ ಮಾರುತಿ ಕರುಣಾಕರಾ |
ಪಾಲಿಸು ಎಮ್ಮನು ಅಭಯಂಕರಾ ‖ ಪ ‖
ದೇವ ದೇವನುತ ಜೀವ ವರಾ |
ಭಾವ ಭಕ್ತಿಯುತ ಭೀತ ಹರಾ ‖
ಕಾಮಿತ ದಾತಾ | ಭೂಮಿಜೆ ಪಾತಾ |
ರಾಮನಾಮ ಪ್ರಿಯ ಸುರ ವಿನುತ ‖ ೧ ‖
ನೀಲಗಗನದಿ ಹಾರುತ ಬಾ |
ಬಾಲರೂಪವ ತೋರುತ ಬಾ |
ಅಗಣಿತ ಮಹಿತ | ಅಜಸುರ ವಿನುತ |
ಅಮಿತ ಪರಾಕ್ರಮಿ ಹರಿದೂತಾ ‖ ೨ ‖
ಪಾಹಿ ಪಾಹಿ ಮಾಂ ಪ್ರಾಣೇಶಾ |
ತ್ರಾಹಿ ತ್ರಾಹಿ ಮಾಂ ಜ್ಞಾನೇಶಾ ‖
ತಾರಕ ಪ್ರೇಮಾ | ತಾಳ್ಮೆದ ಹನುಮಾ ‖
ತಾಪದ ಸಾಗರ ದಾಟಿಸು ನೀ ‖ ೩ ‖

೭೯. "ಗುಮ್ ನಾಂ ಹೈ ಕೋಯೀ" (ಗುಮ್ ನಾಂ) ಎಂಬಂತೆ

ಪರಮಾತ್ಮ ನೀ ಬಾರೈ | ಗುರುದೇವ ನೀ ಬಾರೈ |
ಕರುಣಾಕರಾ, ಪಾಪಾಹರಾ | ಸಂತೋಷವಾನೀಡೈ ‖
ಭವದಾ ನಿಶೆಯೂ ಬೆಂಬಿಡದೂ |
ಭಯದೀ ಜೀವವು ನೊಂದಿಹುದೂ ‖
ಭೂಸುಂದರಾ ಪರಿಪಾಲ ವಿಭೋ | ಬಾ ಚಿನ್ಮಯನೇ ‖
ಚಿನ್ಮಯನೇ ತಾಪಾಹರಿಸು ‖ ೧ ‖
ಚಂಚಲ ವಹುದು ಈ ಮನವು |
ನಿರ್ಮಲವಲ್ಲಾ ಈ ತನುವು ‖
ನಿಶ್ಚಲನೇ ಮತಿ ದಾಯಕನೇ | ಬಾ ಸತ್ಯ ಗುರೂ |
ಸತ್ಯದಲೀ ದೇವಾ ನಡೆಸೂ ‖ ೨ ‖
ತಾಪವನೂ ನೀ ಆರಿಸಿ ಬಾ |
ತಾಳ್ಮೆದ ಹನುಮಾ ಧಾವಿಸಿ ಬಾ ‖
ಧ್ಯಾನಿಸುವೇ ಹೇ ಪ್ರಾಣೇಶಾ ಬಾ ಧೀರವರಾ |
ಧೀಮತಿಯಾ ನೀ ನೀಡುತ ಬಾ ‖ ೩ ‖

೮೦. " ಇಸ್ ದುನಿಯಾಮೇ ಜೀನಾ ಹೋತೋ " (ಗುಮ್ ನಾಂ)-ಎಂಬಂತೆ

ಈ ಜಗದಲ್ಲಿ ಮಾನವ ನಾಗಿ ಬಾಳುವ ರೀತಿ ಕೇಳೋ ‖
ಸೌಜನ್ಯದಾರಿಯಲ್ಲಿ ನೀನೂ ಸಾಗೋ ।
ಮಾತ್ಸರ್ಯ ಭಾವವನ್ನು ನೀನು ನೀಗೋ ‖ ಪ ‖

ಪ್ರಾತಃಕಾಲದಲ್ಲಿ ಎದ್ದು ದೇವರಪ್ರಾರ್ಥನೆ ಮಾಡೂ ।
ಮಾತಾಪಿತರ ಚರಣಕೆ ಎರಗಿ ಸ್ವಾರ್ಥವ ದೂರದೂಡೂ ‖
ನಿತ್ಯ ನೀನು ಗುರುವ ಪಾದ ಸೇವೆಯನ್ನು ಮಾಡೂ ।
ಸತ್ಯದ ಹಾದಿ ಹಿಡಿದೂ ನೀನು ದಾನಾ ಧರ್ಮ ನೀಡೂ ‖ ೧ ‖

ಎಲ್ಲಾ ನಾನೇ ಎಲ್ಲಾನಂದೂ ಎನ್ನುವ ಭ್ರಾಂತಿ ನೀಗೂ ।
ಬಲ್ಲಿದ ನಾನು ಬಡವನು ನೀನು ಎನ್ನುವ ಭೇದ ದೂಡೂ ‖
ಬಲ್ಲವನಾದ ಗುರುವು ತೋರ್ವ ದಾರಿಲಿ ನೀನೂ ಸಾಗೂ ।
ಕಲ್ಲು ಕಾಷ್ಠ ಎಲ್ಲಾ ಕಡೆಯೂ ದೇವನ ರೂಪಾ ನೋಡೂ । ೨ ‖

ಅ ಹನುಮಂತ ಕಿಷ್ಕಿಂಧೆಯಲಿ ರಾಮನ ತಾನೂ ಕಂಡ ।
ಹಾಡೀ ಪಾಡೀ ನಲಿದೂ ಒಲಿದು ಆದನು ಅವನ ಭಂಟ ‖
ಮಾಡಲು ಆಗ ನಿಶ್ಚಲಸೇವೇ ರಾಮನು ಅವನೊಳು ನಿಂದ ।
ನೋಡೂ ನೀನು ನಿತ್ಯವು ನಮ್ಮ ತಾಳ್ಯದ ಹನುಮನಚಂದ ‖ ೩ ‖

೮೧. " ಜಾನೇ ಚಮನ್ " (ಗುಮ್ ನಾಂ)—ಎಂಬಂತೆ.

ವಾಯುಸುತಾ । ದೇವನುತ । ವರರೂಪ ನೀ ತೋರೋ ।
ಓ ಪ್ರಭುವೇ । ಘನವಿಭುವೇ । ಕರುಣಾಳು ನೀ ಬಾರೋ ‖ ಪ ‖

ಭವಪಾಶದಾ ಬಂಧನಾ । ಮೋಹಾಂಧದಾ ಲಿಂಗನಾ ।
ಸಿಲುಕೀ ಬಹೂ ನೊಂದಿಹೇ .... ।
ಪರಿಪಾಲಿಸೈ ತಂದೆಯೇ ‖ ೧ ‖

ಕಡು ಕರ್ಮದೀ ನೊಂದುನಾ । ಕ್ರೋಧಾಗ್ನಿಲಿ ಬೆಂದೆನೇ ।
ಕರುಣಾಕರಾ ವಂದಿಪೇ ।
ಪರಿಪಾಲಿಸೈ ತಂದೆಯೇ .... ‖ ೨ ‖

ಪರ ಜ್ಞಾನವಾ ನೀಡಿ ನೀ । ಅರಿವರ್ಗವ ನೀಗು ನೀ ।
ವರ ತಾಳ್ಯದಾ ಹನುಮನೇ ।
ಚಿರ ಶಾಂತಿಯ ನೀಡು ನೀ ‖ ೩ ।

೬೨. " ಜಯ ಗೌರೀ ಜಗದೀಶ್ವರೀ " (ಸ್ವರ್ಣಗೌರಿ)—ಎಂಬಂತೆ

ಗುರುದೇವ । ಕರುಣಾಕರಾ ॥
ಕಾಯೋ ಎನ್ನ ದಯಾಸಾಗರಾ ॥ ಪ ॥
ಚಿನುಮಯ ರೂಪಾ । ಪ್ರಣವ ಸ್ವರೂಪಾ ।
ಚೈತನ್ಯ । ಮಹೋದಯ ಭೂಪ ।
ಚಿರವರ ಜ್ಞಾನ ಪ್ರಕಾಶಕ ದೀಪಾ ॥
ಚಿತ್ಸುಖ, ಚಿದ್ಭವ .... ಸಾಧಕಾ .... । ೧ ॥
ಅನುದಿನ ನಿನ್ನ ಘನತರ ಸೇವಾ ।
ನೀ ನೀಡೀ । ನಿರಾಮಯ ಕಾಯೋ ॥
ಅನುಪಮ ನಿನ್ನಯ'ಪಾದ ಪ್ರಭಾವಾ .... ।
ಜ್ಞಾನದ ಜ್ಯೋತಿಯ ಬೆಳಗಿಸೋ ॥ ೨ ॥
ಭವ ಭಯದೂರಾ ಚಿರ ಸುಖ ಧಾಮಾ ।
ಶಿವರೂಪಾ ! ಪರಾತ್ಪರ ಭೀಮಾ .... ॥
ತವಪದ ತೋರುನಿ ತಾಳ್ಯದ ಹನುಮಾ ॥
ಭಾವುಕ, ಶ್ರೀಗುರು, ಪಾಲಿಸೂ ॥ ೩ ॥

೬೩. " ನಟವರ ಗಂಗಾಧರ " (ಸ್ವರ್ಣಗೌರಿ) — ಎಂಬಂತೆ

ಗುರುವರ ಚೈತನ್ಯ ನೇ । ಸುರಾವಂದ್ಯನೇ ।
ಹೇ ದೇವಾ । ಮಹೇಶಾ । ಪರೇಶಾ .... ॥ ಪ ॥
ಭವದಿ ಬಹು ನೊಂದು ಗುರು ನಾನು ಬೆಂದೇ ।
ಭಯದೀ ನಾ ನೊಂದೇ .... ॥
ಭೂರಿ ಪರಿತಾಪ ಗುರು ನೀನು ನೀಗೀ ।
ಭರದೀ ನೀ ಕಾಯೋ.... ॥ ೧ ॥
ಜ್ಞಾನವನು ನೀಡಿ ಗುರುದೇವ ಕಾಯೋ ।
ಪರನೇ ಹೇ ಪ್ರಭುವೇ .... ॥
ಮಾನ್ಯ ಪರಮೇಶ ವರ ರಾಮದಾಸಾ — ।
ಗುರುವೇ ನೀ ಬಾರೋ ........ ॥ ೨ ॥
ತೋರು ಗುರು ನಿನ್ನ ವರ ಪಾದವನ್ನು ।
ಸುರನೇ ವಂದಿಸುವೇ ........ ॥
ತಾಳ್ಯದ್ಹನುಮಂತ ನಿಜರೂಪ ನೀನೂ ।
ಹರಿಸೋ ಬಂಧನವಾ ॥ ೬ ॥

೮೪. "ಸಿರಿತನ ಬೇಕೆ ಬಡತನ ಸಾಕೇ" (ಮನಮೆಚ್ಚಿದ ಮಡದಿ)—ಎಂಬಂತೆ

ಗುರುವರ ದೇವಾ । ಕರುಣೆಯ ತೋರೋ ।
ಸನ್ನುತ ಗುರುವರಾ । ಜೀವನವೋ ದೇವನವೋ ॥ ಪ ॥
ತನ್ಮಯ ಭಾವದಿ ನಿನ್ನಯ ಭಜಿಸುವ ।
ಮನವನು ನೀಡೋ । ದೇವವರಾ । ದೇವವರಾ ॥ ಅ. ಪ. ॥
ಸಿರಿತನಾ ಬಡತನಾ ಏನೇಬರಲೀ ।
ಸಾವಿನ ನೋವಿನ ಬಂಧನ ಇರಲೀ ॥
ಸಹಿಸುವ ಶಕ್ತಿ ಎನ್ನೊಳು ಇರಿಸೈ ।
ಚಿರಶಾಂತಿಯ ನೀಡೈ ನೀ ! ಚಿರಶಾಂತಿಯ ನೀಡೈ ॥ ೧ ॥
ಕಡುತರ ಸಾಧನೆ ತಿಳಿಯದು ಸ್ವಾಮೀ ।
ಗುರುತರ ಭಕ್ತಿಯು ಎನ್ನಲಿ ಇಲ್ಲಾ .... ॥
ಗುರುವರ ನೀನೂ ಎಂಬುದ ಬಲ್ಲೇ .... ।
ಚಿರ ಶಾಂತಿಯ ನೀಡೈ । ನೀ .... । ಚಿರಶಾಂತಿಯಾ ನೀಡೈ ॥ ೨ ॥
ತನುವಿನಾ ಕರ್ಮವಾ ನೀಗಿಸು ಪ್ರಭುವೇ ।
ಮನವನು ನಿರ್ಮಲ ಗೊಳಿಸೈ ಗುರುವೇ ॥
ಚಿನುಮಯರೂಪಾ । ತಾಳ್ಯದ ಹನುಮಾ .... ।
ಚಿರಶಾಂತಿಯಾ ನೀಡೈ । ಚಿರಶಾಂತಿಯ ನೀಡೈ ॥ ೩ ॥

೮೫ "ಯಾವ ಜನ್ಮದ ಮೈತ್ರಿ" (ಗೌರಿ) — ಎಂಬಂತೆ

ದೇವ ಚಿನ್ಮಯ ರೂಪಾ । ಈ ಜನ್ಮದಲಿ ನಿನ್ನ ।
ಸದ್ಭಕ್ತನನು ಮಾಡೀ । ಧನ್ಯನೆನಿಸೋ ಎನ್ನ ॥ ಪ ॥
ಎನ್ನಯ್ಯ ಚೈತನ್ಯ । ಭಕ್ತವರ ಜಗಮಾನ್ಯ ।
ನೀ ನೀಡು ಪುಣ್ಯಾ । ಬಾರೆನ್ನ ಸದ್ಗುರೂವರ್ಯ ॥ ೧ ॥
ಏಳಿಗಾಂವಲಿ ನೀನು । ಗುರುವ ನರಸುತ ಬಂದೆ ।
ಬಾಳ ಬೆಳಕನು ಕಾಣೆ । ಕಾರ್ಗತ್ತಲಲಿ ನಿಂದೇ ॥
ಬಲವಂತ ನೀನಾಗೀ । ಸರ್ವಕಷ್ಟವ ಗೆಲಿದೇ ।
ಒಲವಿನಲಿ ಗುರುಇತ್ತ । ಜ್ಞಾನ ತೀರ್ಥದಿ ಮಿಂದೆ ॥ ೨ ॥
ಗುರು ಭಕ್ತಿ ಶ್ರದ್ಧೆಗಳಾ । ರಕ್ಷೆಯಾಂತುನಿ ನಿಂದೆ ।
ರಾಮತಾರಕ ಮಂತ್ರ । ಸಾರುತಲಿ ನೀ ಮೆರೆದೆ ॥
ವಂದಿಸುವೆ ಗುರುದೇವ । ತಾಳ್ಯದ್ಹನುಮನ ರೂಪ ॥
ಎಂದೆಂದು ಸಂತಸವ ಕೊಡೂ ॥ ೩ ॥

೮೭. " ಗಾತಾರಹೇ ಮೇರಾ ದಿಲ್ " (ಗೈಡ್)—ಎಂಬಂತೆ

ಬಾರೋಪ್ರಭೂ ಹನುಮಾ । ತೋರೋ.... ಗುರೋ.... ಮಹಿಮಾ || ಪ ||
ಕಹಿನೀಗು ಗುರುರಾಯಾ | ಸಿಹಿನೀಡೂ ಮನದಲೀ || ಅ. ಪ. ||

ದೇವ ಅಂಜನಿ ಕುವರಾ । ನೀ ಹಾರಿದೇ ಆಗಸಕೇ ||
ರವಿಯಾ ಹಿಡಿಯಾ ಹೋದೇ । ವಜ್ರಾಘಾತ ಪಡೆದೆ ||
ವರಗಳ ಪಡೆದು ನೀನೂ ಮೆರೆದೆ | ಮಾನ್ಯನು ಆದೆ ಗುರುವೇ ।
ಕಹಿನೀಗೂ ಗುರೂ......... ಓ
ಕಹಿನೀಗೂ .... ಗುರುರಾಯಾ । ಸಿಹಿನೀಡೂ ಮನದಲಿ || ೧ ||

ರಾಮುಗೇ ಶರಣೆಂದೇ । ನೀ ಹಾರಿ ಲಂಕೆಗೆ ಬಂದೇ ||
ಅಕ್ಷನ ಕೊಂದು ನಿಂದೇ । ಲಂಕೇಯನ್ನು ಸುಟ್ಟೆ ||
ಸೀತೆಯ ಕಂಡು ತಣಿದೆ ದೇವ । ಧನ್ಯನು ಆದೆ ಗುರುವೇ .... ।
ಕಹಿನೀಗೂ ಗುರು ........ ಓ
ಕಹಿನೀಗೂ ಗುರುರಾಯಾ । ಸಿಹಿ ನೀಡೂ ಮನದಲೀ || ೨ ||

ಓ ಪ್ರಭೂ ಜಗದೀಶಾ । ಹರಿಮಾಯದಾ ಈ ಪಾಶ ।
ದಹಿಸು ಎನ್ನಾ ದೋಷಾ । ಗುರು: ಮಾರುತೀಶಾ ||
ತಾಳ್ಯದ ಹನುಮ ಕರುಣೆ ತೋರಿ । ಧನ್ಯನ ಮಾಡು ತಂದೇ ।
ಕಹಿನೀಗೂ ಗುರು ........ ಓ
ಕಹಿನೀಗೂ ಗುರುರಾಯಾ । ಸಿಹಿನೀಡೂ ಮನದಲೀ || ೩ ||

೮೮. " ಕಾಂಟೋಂಸೆ ಖೀಂಚಿಕೆ ಥೆ ಆಂಚಲ್ " (ಗೈಡ್) ಎಂಬಂತೆ

ಓಡೋಡಿ ಬಂದೆ ನಾನು ದೇವಾ । ನೀಡಯ್ಯ ನಿನ್ನ ಪಾದಸೇವಾ || ಓ ಓ
ಹಾಡುತ್ತ ನಲಿವ ಮನವನ್ನು ನೀಡೋ ....। ಜ್ಞಾನೇಶ್ವರಾ... ಹಹ್ಹಹಾ....
ನೀ ನೀಗಿಸಯ್ಯ ಭವತಾಪವ । ನೀ ತೋರಿಸಯ್ಯ ನಿಜರೂಪಾವ || ೧ ।

ವೇದಾಂತ ವೇದ್ಯನೆ ಬಾರೋ । ನಾದಾಂತರಂಗನೇ ನೀಬಾರೋ || ಓ ಓ
ಹೇ ದೇವಸ್ವಾಮಿ ಮುದವನ್ನು ತೋರೋ....। ಜ್ಞಾನೇಶ್ವರಾ.... ಹಹ್ಹಹಾ.||
ನೀ ನೀಗಿಸಯ್ಯ ಭವತಾಪಾವ । ನೀ ತೋರಿಸಯ್ಯ ನಿಜ ರೂಪಾವ || ೨ ||

ಬಾರೆನ್ನ ಪ್ರಾಣನಾಥ ದೇವಾ । ನೀಗೆನ್ನ ಅಂತರಂಗ ನೋವಾ .. || ಓ ಓ
ಓ ತಾಳ್ಯದ್ಹನುಮ ಪ್ರಭು ನೀನು ಬಾರೋ....। ಜ್ಞಾನೇಶ್ವರಾ ಹಹ್ಹಹಾ||
ನೀ ನೀಗಿಸಯ್ಯ ಭವತಾಪವ । ನೀ ತೋರಿಸಯ್ಯ ನಿಜರೂಪಾವ || ೩ ||

೮೮. " ಯುಗ ಯುಗಾದಿ ಕಳೆದರೂ " (ಕುಲವಧು)—ಎಂಬಂತೆ

ಜಯ ಜಯಾ ಮಹೇಶ್ವರಾ । ಸುರೇಶ ಪರಮ ಸುಂದರಾ ।
ಬವ ಭಯಹರ । ಜಯ ಸುರವರ ॥
ಪರಮ ಕರುಣ ಚಂದಿರಾ .... । ಪರಮ ಕರುಣ ಚಂದಿರಾ । ಪ ॥
ಗಂಗೆಯನ್ನು ಧರಿಸಿ ಶಿರದಿ । ಮಂಗಳಾಂಗ ನಾಗಿ ಮೆರೆದೆ ।
ಚಂದ್ರ ಚೂಡ ಶುಭಕರಾ .... । ಓ ಓ ಓ ....
ಪಾವನ ಗುರು ಸರ್ಪ ಭೂಷ । ಪಾರ್ವತಿ ಪ್ರಿಯ ನಾಥ ಈಶ ।
ಭಾವ ಭಕುತಿ ಕರುಣಿಸೂ ॥ ೧ ॥
ಗಣಪ ವಂದ್ಯ ದಿವ್ಯ ತೇಜ । ಪ್ರಣವರೂಪ ನಾಟ್ಯರಾಜ ।
ತ್ರಿಣಯ ಸೋಮಶೇಖರಾ .... । ಓ ಓ ಓ ....
ನಂದಿವಾಹ ಬಂಧಹಾರಿ । ಬೃಂಗಿನಾಥ ಅಂಧಕಾರಿ ।
ಮುದದಿ ಬಂದು ಪಾಲಿಸೂ ॥ ೨ ॥
ಭಸಿತ ಭೂಷ ಭೂತಪಾಲ । ಮಸಣವಾಸ ರುಂಡಮಾಲ ।
ವೃಷಭ ವಾಹ ದೇವನೇ .... । ಓ ಓ ಓ—
ಸುಂದರಾಂಗ ಮಂದಹಾಸ । ತಂದೆ ತಾಳ್ಯದ್ಹನುಮ ಈಶ ।
ವದನ ತೋರಿ ಪಾಲಿಸೂ ॥ ೩ ।

೮೯. " ಹುಯ್ಯೋ ಹುಯ್ಯೋ ಮಳೆರಾಯಾ " (ಸತೀಶಕ್ತಿ) ಎಂಬಂತೆ

ವಂದೆ ವಂದೇ ಜಗದೀಶಾ ।
ವಂದೇ ದೇವ ಪ್ರಾಣೇಶಾ ॥ ಪ ॥
ತ್ರಯತಾಪ ಭಯದಲೀ ಈ ಜೀವಾ ।
ತಾನೊಂದು ಬೆಂದಿದೆ ಹೇದೇವಾ ॥
ತವಪಾದ ಪಿಡಿಯುವೆಸಂಜೀವಾ । ತಮಸಾಗ್ನಿ ಆರಿಸುಗುರುರಾಯ ॥೧॥
ನೇಮ ನಿಷ್ಠೆ ಅಚಲ ಭಕ್ತಿ ಪರಮ ಕೀರುತೀ ।
ರಾಮ ದಾಸ ಜ್ಞಾನ ದೇವ ದಿವ್ಯ ಮೂರುತೀ ॥
ಕಾಮ ಕ್ರೋಧ ಹರಿಸಿ ದೇವ ನೀಡು ಶುಭಮತೀ ।
ಪ್ರೇಮ ದಿಂದ ನೋಡು ಎನ್ನ ದೇವ ಮಾರುತೀ ॥ ೨ ॥
ಮಂಗಳಾಂಗ ತೋರು ನಿನ್ನ ಪರಮ ಪಾದವಾ ।
ರಂಗನಾಥ ದಾಸ ನೀನು ಬೀರು ಮೋದವಾ ॥
ಕಂಗಳಲ್ಲಿ ನೆಲಸು ಸ್ವಾಮಿ ತಾಳ್ಯದ್ಹನುಮನೇ ।
ಭೃಂಗಿನಾಥ ಪ್ರಿಯನೆ ನಿನ್ನ ನೋಡಿ ತಣಿಯುವೇ ॥ ೩ ॥

೯೦. " ಈ ದೇಹದಿಂದ ದೂರನಾದೆ ಏಕೆ ಆತ್ಮನೆ " (ಓಹಿಲೇಶ್ವರಾ) ಎಂಬಂತೆ

ಹೇ ದೇವನಿನಗೆ ಮೌನವೇಕೆ ಹೇಳು ಸ್ವಾಮಿಯೇ ।
ನಾ ತಾಳಲಾರೆನೋ । ನಾ ತಾಳಲಾರೆನೋ॥ ಪ ॥
ಸಂಜೀವ ನಿನಗಾಗಿ ನಾ ನೋಡಿ ಬಂದೆ ನೋ ॥ ಅ. ಪ. ॥

ಸ್ನಾನ ಸಂಧ್ಯ ನಿತ್ಯ ನಿಯಮು ನಾನು ಅರಿಯನೋ ।
ಮೌನ ಧ್ಯಾನ ನೀತಿ ಧರ್ಮ ಏನೂ ತಿಳಿಯೆ ನೋ ॥
ನಾನು ರಾಗದೀ, ನಿನ್ನ ಕೂಗುವೇ .... ।
ಗುರು ನೀನೂ ಬಾರದಿದ್ದೊಡೇ .... । ನಾ ತಾಳ ಲಾರೆನೋ ॥
ಸಂಜೀವ ನಿನಗಾಗಿ ನಾ ನೋಡಿ ಬಂದೆನೋ ॥ ೧ ॥

ಭಾವಭಕುತಿಯನ್ನು ನಾನು ಅರಿಯೆ ದೇವನೇ ।
ಜೀವ ದಾಶೆ ಎನ್ನಲಿಹುದು ಕೇಳು ಸ್ವಾಮಿಯೇ ॥
ಕಾವುದೆನ್ನನೂ, ನೀಡಿ ಜ್ಞಾನವಾ .... ।
ಭವತಾಪಾ ನೀಗ ದಿದ್ದೊಡೆ ನಾ ತಾಳಲಾರೆನೋ ॥
ಸಂಜೀವ ನಿನಗಾಗಿ ನಾ ನೋಡಿ ಬಂದೆನೋ ॥ ೨ ॥

ತಾಯಿ ಸೀತೆಯನ್ನು ಹುಡುಕಿ ಸೇವೆ ಮಾಡಿದಾ ।
ತಾಳ್ಯದ್ಧನುಮ ನಿನ್ನ ಪಾದ ನಂಬಿ ಬಂದಿಹೇ ॥
ತಾಳ್ಯದ್ಧನುಮ ನಿನ್ನ ಪಾದ ನಂಬಿ ಬಂದಿಹೇ ।
ನಂಬಿ ಬಂದಿಹೇ ನಂಬಿ ಬಂದಿಹೇ । ನಂಬಿ ಬಂದಿಹೇ ॥ ೩ ॥

೯೧ ["ಕಿವಿಮಾತೊಂದಾ ಹೇಳೆ ನಾನೋಡಿ ಬಂದೆ"| (ಕಠಾರಿವೀರ)–ಎಂಬಂತೆ

ಮಹದಾನಂದಾ | ನೀಡು ಶ್ರೀರಾಮಚಂದ್ರಾ ।
ಓ .... ಓ ರಘುರಾಮಾ ನೀ ಆಲೈಸೂ .... ॥ ಪ ॥
ಜಾನಕೀ .... ಮನದಾ ನಿಜವಾಸಾ ।
ಗುರುವರ ಮಾರುತಿ .... ಆತ್ಮಾನಿವಾಸ ॥
ಓ ಪ್ರಭುವೇ .... | ಓ ಪ್ರಭುವೇ ಪರಮೇಶನೆ ಬಾರೋ ॥ ೧ ॥

ಶಬರಿಯಾ .... ಮನದೀ ನೀನಿಂದೆ 1
ಗುಹನನು ಧನ್ಯನ ನೀ ಮಾಡಿ ಕಾಯ್ದೆ ॥
ಸಿರಿವರನೇ.... | ಸಿರಿವರನೇ ಮಣಿವೇ ದಯಮಾಡೋ ॥ ೨ ॥

ನೀತಿಲೀ .... ನಡೆವಾ ಮನ ನೀಡೋ ।
ಪ್ರಭೂವರ ತಾಳ್ಯದ ಹನುಮಯ್ಯ ದೇವಾ ॥
ಹೇ ವಿಭುವೇ.... ॥ ಹೇ ವಿಭುವೇ ನಮಿಪೇ ರಘುರಾಮಾ ॥ ೩ ॥

೯೨. " ಜಯತುಜಯ ವಿಠಲಾ " (ಸಂತ ತುಕಾರಾಂ)—ಎಂಬಂತೆ.

[ಜಯತುಜಯ ಗುರುವೇ | ನಾರಣಪ್ಪಾ | ಸದ್ಗುರುನಾಥಾ ||]
ಜಯತುಜಯ ಗುರುವೇ ||
ಕುಂದಗೋಳಿನ | ನಾರಣಾಪ್ಪನೆ | ದೇವ ನೀ ಬಾರೋ || ಪ ||
ದತ್ತಪ್ರಭುವಾ ಮಂದಿರದಲ್ಲೀ |
ನಿನ್ನ ಬಿಡದಿರೆ ಖಿನ್ನ ನೀನಾದೆ ||
ಸಾಧುಸ್ವರೂಪದಿ ಛತ್ರದ ದ್ವಾರದಿ |
ತಾ ಬಂದು ನಿಂದನಯ್ಯ ದತ್ತದೇವ ದತ್ತದೇವಯ್ಯಾ || ೧ ||
ಗೊಂದಾವಲಿಯು ಗುರುವಿನ ಕೃಪೆಯಿಂ |
ಬ್ರಹ್ಮಾನಂದರ | ಕಂಡೆಯೋ ನೀನು ||
ಚಿನ್ಮಯರೂಪರ | ಸೇವೆಯ ಮಾಡುತ |
ಧರ್ಮಯಂತ್ರವನ್ನು ಪಡೆದೆ ನಾರಣಪ್ಪ ನಾರಣಪ್ಪನೇ || ೨ ||
ರಾಮನಾಮವಾ | ಸಾರಿದೆ ಜಗದೀ |
ನಾಮಯಜ್ಞವ ಮಾಡಿದೆ ಮುದದೀ ||
ತಾಳ್ಯದ ಹನುಮನ ಸೇವೆಯ ಮಾಡಿದೆ |
ತಾಪಹರಿಸಿ ಪಾಲಿಸಯ್ಯ ನಾರಣಪ್ಪ ನಾರಣಪ್ಪನೇ || ೩ ||

೯೩. ಕನಸೊಂದೆ ಕಂಡೆ ಕನ್ನಡಮಾತೆ " (ನಂದಾದೀಪ)—ಎಂಬಂತೆ.

ಕನಸೊಂದ ಕಂಡೆ ನಿನ್ನೆಯ ರಾತ್ರಿ |
ಹನುಮಯ್ಯ ಬಂದು ನಲಿದಂತೆ | ಕನಸೊಂದ ಕಂಡೆ
ನಿನ್ನೆಯ ರಾತ್ರಿ || ಪ ||
ನೇಮದಾ ಮಂದಿರಾ | ಬಳಿಯಲೀ.... ಪ್ರೇಮದಾ ನದಿಯನೂ |
ರಾಮಭಕ್ತರು ಅದರಲ್ಲಿ ಮಿಂದು |
ರಾಮನಾಮವಾ ಭಜಿಸುತ್ತಲಿರಲೂ ||
ಹನುಮಾ ಕುಣಿಕುಣಿದಂತೆ || ೧ ||
ಪ್ರೇಮದಾ ವೃಕ್ಷವೂ | ಅದರಲೀ....ಕರ್ಮದಾ ಎಲೆಗಳೂ |
ರಾಮನೆಂಬುವ ಹಣ್ಣನ್ನು ಪಡೆಯೆ |
ಧರ್ಮಪಕ್ಷಿಯು ಹಾರುತ್ತಲಿರಲು ||
ಹನುಮಾ ಕುಣಿಕುಣಿದಂತೆ || ೨ ||
ಭಕ್ತರಾ ಪೊರೆಯಲೂ | ಅವರಿಗೆ ಮುಕ್ತಿಯಾ ನೀಡಲು |
ಶಕ್ತ ತಾಳ್ಯದ ಹನುಮಂತ ಬಂದು |
ಭಕ್ತಿಮಾರ್ಗವ ತೋರುತ್ತ ಪೊರೆದು ||
ಹರಸೀ, ಮರೆಯಾದಂತೆ || ೩ ||

೯೪, "ಬೇಡ ಕೃಷ್ಣಾ ರಂಗಿನಾಟ" (ಸಂತ ತುಕಾರಾಂ)—ಎಂಬಂತೆ.

ಬಾರೋ ಪ್ರಭೂ ರಾಮದೂತ ದೇವ ಹನುಮನೇ ।
ಚಂದದಿಂದ ಭಕ್ತರನ್ನು ಪೊರೆವ ದೇವನೇ ॥ ಪ ॥

ನಿನ್ನ ಬಿಟ್ಟು ಅನ್ಯರನೂ ನಾನು ಕಾಣೆನೋ ।
ಸನ್ನುತಾಂಗ ಎಂದು ಎಂದಿಗೂ ನಿನ್ನ ನಂಬಿಹೇ ॥ ೧ ॥

ದೇವವರಾ, ಎನ್ನ ಗುರೂ, ಕೋಪ ಏತಕೇ ?.... ।
ಕಾವುದಯ್ಯಾ ಬಿದ್ದೆನು ನಾ ನಿನ್ನ ಪಾದಕೇ.... ।
ನಿನ್ನ ಪಾದಕೇ, ನಿನ್ನ ಪಾದಕೇ.... ॥
ಚಂದದಿಂದ ಭಕ್ತರನ್ನು ಪೊರೆವ ದೇವನೇ ॥ ೨ ॥

ಚಿನ್ಮಯನೇ, ವಾಯುಸುತಾ, ಕಾಯೋ ಪರಮನೇ ।
ಎನ್ನ ತಪ್ಪು ಮನ್ನಿಸು ನೀ, ತಾಳ್ಯದ್ಹನುಮನೇ.... ।
ತಾಳ್ಯದ್ಹನುಮನೇ, ತಾಳ್ಯದ್ಹನುಮನೇ ॥
ಚಂದದಿಂದ ಭಕ್ತರನ್ನು ಪೊರೆವ ದೇವನೇ ॥ ೩ ॥

೯೫. "ಸ್ವಾಭಿಮಾನದ ನಲ್ಲೆ" (ವೀರಕೇಸರಿ)—ಎಂಬಂತೆ.

ಸ್ವಾಭಿಮಾನವ ನೀಡೂ । ದುರಭಿಮಾನವ ದೂಡೂ ।
ಸತ್ಯಮಾರ್ಗದಿ ನಡೆಸು ಹನುಮನೇ, ಹರುಷ ನೀ ನೀಡೂ ॥ ಪ ॥

ನೇಮ ನೀತಿಯ ಇರಿಸಯ್ಯಾ ।
ಕಾಮಪಾಶವ ಹರಿಸಯ್ಯ ॥
ರಾಮದಾಸನೆ ಪ್ರೇಮದಿಂದಲಿ ಬಾರೊ ಗುರುವರ್ಯ ॥ ೧ ॥

ಕರ್ಮಕಲುಷದಿ ನಾ ಬೆರೆತು ।
ಧರ್ಮಮಾರ್ಗವ ನಾ ಮರೆತು ॥
ಜನ್ಮಮರಣವ ಮತ್ತೆ ಮತ್ತೆ ನಾ ಗಳಿಸಿ ಬಹುನೊಂದೆ ॥ ೨ ॥

ಭೂರಿ ಪಾಪವ ನಾ ಗಳಿಸೀ ।
ದಾರಿ ಕಾಣದೆ ನರಳುತಿಹೇ ॥
ಧೀರ ತಾಳ್ಯದ ಹನುಮದೇವನೆ ಬಾರೋ ಕೃಪೆತೋರೋ ॥ ೩ ॥

೯೬. "ಜಯಜಯರಾಮ" (ರಾಮಾಂಜನೇಯ ಯುದ್ಧ)—ಎಂಬಂತೆ.

ಜಯ ಜಯ ಹನುಮ । ಜಯ ಗುಣಧಾಮ ।
ಜಯ ಜಯ ಬಲಭೀಮ । ದೇವ । ಜಯ ಜಯ ಬಲಭೀಮ ॥ ಪ ॥
ಮಾರುತಿರಾಯಾ । ವಾನರಕಾಯಾ । ಜಯ ಜಯ ಸಂಜೀವ ।
ಕಾವಾ । ಜಯ ಜಯ ಸಂಜೀವ ॥ ಅ. ಪ ॥
ಅಂದೂ ಬಾಲ್ಯದಿ ಸೂರ್ಯನ ಹಿಡಿಯೆ । ಚಂದದಿ ಹಾರಿದೆ ಗಗನದಲಿ ।
ಇಂದ್ರನು ಬೀಸಿದ ವಜ್ರಾಯುಧಕೆ । ಸಿಲುಕುತ ಬಿದ್ದೆಯೊ ಧರಣಿಯಲಿ ॥
ತಂದೆಯ ಕೃಪೆಯಿಂ ಪ್ರಾಣವ ಪಡೆದು । ಗಳಿಸಿದೆ ವರಗಳನು । ದೇವಾ ॥ ೧ ॥
ಮುನಿಗಳ ಜೊತೆಯಲಿ ಘನತರ ಸಾಧನೆ ನಡೆಸುತ ಪಡೆದೆಯೊ ಶಕ್ತಿಯನು ।
ಮನವನು ನಿರ್ಮಲಗೊಳಿಸುತ ನೀನು । ನೀತಿಯ ಬೀಜವ ಬಿತ್ತಿದೆಯೋ ॥
ಮಾನ್ಯನೆಂದೆನಿಸಿ ಗುರುವರ ಮೆರೆದೆ । ವಾನರಕುಲ ಸೋಮ । ದೇವಾ ॥ ೨ ॥
ಭ್ರಾತೃಭೀತ ಸುಗ್ರೀವನಿಗಾಗಿ । ಋಷ್ಯಮೂಕದಲಿ ನಿಂದೆ ।
ಸೀತೆಯನರಸುತ ಅಲ್ಲಿಗೆ ಬಂದಾ । ರಘುರಾಮನ ನೀ ಕಂಡೆ ॥
ಭಕ್ತಿಯಭಾವದಿ । ರಾಮಗೆ ನಮಿಸಿದೆ । ಭಕ್ತರ ಕುಲಸೋಮ । ದೇವಾ ॥ ೩ ॥
ರಾಮಾ........ರಾಮಾ........ರಾಮಾ........ ॥
ರಾಮಾ ಎನ್ನುತ ಸಾಗರ ಲಂಘಿಸಿ । ಪ್ರೇಮದಿ ಮುಟ್ಟಿದೆ ಲಂಕೆಯನು ।
ರಾವಣ ರಾಜನ ಕೈಯೊಳು ಸಿಲುಕಿದ । ಸೀತೆಗೆ ಅರುಹಿದೆ ಸುದ್ದಿಯನು ॥
ರಾಕ್ಷಸಗಣವನು ನಾಶವಮಾಡೀ । ಲಂಕೆಯಾ ದಹಿಸಿದೆ ನೀ ದೇವಾ ॥ ೪ ॥
ಸೇತುವೆ ನಿರ್ಮಿಸಿ ಲಂಕಾನಗರಿಗೆ । ನಡೆದೆಯೋ ರಾಮನ ಜೊತೆಗೆ ।
ನೀತಿಯ ಯುದ್ಧದಿ ಲಂಕೆಯ ಸೈನ್ಯವ । ತರಿದು ನಿಂದೆಯೋ ವಿಭುವೇ ॥
ಖ್ಯಾತಿಯ ಪಡೆದು ಮೆರೆದೆಯೊ ಗುರುವೆ । ಪಾವನಗುಣಧಾಮ । ದೇವಾ ॥ ೫ ॥
ಧೀರ ನಿನ್ನಯ ಅನುಪಮಸೇವೆಯಿಂ । ಪಡೆದನು ಲಕ್ಷ್ಮಣ ಪ್ರಾಣಾ ।
ವೀರ ರಾಮನ ಬಾಣಕೆ ಸಿಲುಕಿದ । ರಾವಣನಾದ ನಿರ್ಯಾಣಾ ॥
ಶ್ರೀ ರಘುವರನ ಹೃದಯದಿ ಪಡೆದೆ । ತಾಳ್ಮದಾ ಹನುಮಂತ । ದೇವಾ ॥ ೬ ॥

೯೭. "ಮನಮೋರಾ ಬಾವರಾ" (ರಾಗಿಣಿ)—ಎಂಬಂತೆ.

ಕರುಣಿಸು । ಮಾರುತೀ ॥
ದರುಶನ ನೀಡೈ । ದೇವ ಶ್ರೀ ಗುರುವೇ ॥ ಪ ॥

ಆಶಾಗೋಪುರ । ಲೇಶವು ಮುರಿಯದೆ — ।
ಶ್ರೀಶಾ ವಿನುತಾ ದೇವಾ ಕಾಯೋ....॥ ಈಶಾ....ವಾನರ....ರಾಜಾ ॥ ೧ ॥
ಮನಮಂದಿರದಲಿ । ಚಿನುಮಯ ನೆಲಸೈ ।
ಘನತರಸೇವೇ । ಅನುದಿನ ಗೈವೇ.... ॥ ಮಾಯಾ....ಹರಿಸುತ.. .ಕಾಯೋ ॥೨॥
ಭಾವುಕ ಭಕ್ತರ । ಬಂಧನ ಹರಿಸುವ ।
ಕ್ತಶಿರೋಮಣಿ ತಾಳ್ಮದ ಹನುಮಾ ॥ ಬಾರೋ....ಎನ್ನಯ....ದೇವಾ ॥ ೩ ॥

೯೮, "ರಾಧಾ ಮಾಧವ ವಿನೋದ ಹಾಸ" (ಸ್ಕೂಲ್ ಮಾಸ್ಟರ್)-ಎಂಬಂತೆ

ದೇವಾಮಾರುತಿ ಪ್ರಭಾವ ಚರಿತಾ |
ಭಾವುಕ ಭಕ್ತರ ಭಾಗ್ಯ ವಿಧಾತ ‖ ಪ ‖
ವಾನರಕುಲದಾ ಜ್ಯೋತಿ ಎಂದೆ ನಿಸೀ |
ದಾನವ ಶಕ್ತಿಯ ಸಂಹರಿಸೀ .... ‖
ಜಾನಕಿ ರಾಮರ ಸೇವೆಯಮಾಡೀ | ಆ ಆ ....
ಮಾನವ ಕುಲವನ್ನು ಪೊರೆದೆಯೋದೇವಾ ‖ ೧ ‖
ವಾತಾತ್ಮಜ ವರ ಶಾಂತಿ ವಿಶಾಲಾ .... |
ಮಾತೆಯ ವಚನಾ ಪರಿಪಾಲಾ ‖
ಕರ್ತವ್ಯವನು ಎಸಗಲು ನೀನೂ | ಆ ಆ ........
ಸೀತಾ ಪತಿಯನು ಎದುರಿಸಿ ನಿಂದೆ ‖ ೨ ‖
ಪಾವನೆ ಕನ್ನಡ ಮಾತೆಯ ಕುವರಾ |
ಭಾವುಕ ಭಕ್ತನೆ ಧೀರವರಾ |
ಕಾವುದು ಎನ್ನನು ತಾಳ್ಮದ ಹನುಮಾ | ಅ ಅ ....
ಜೀವನ ಜ್ಯೋತಿಯ ಬೆಳಗುತ ಬಾರೋ ‖ ೩ ‖

೯೯. "ಇನ್ನೇನು ಆನಂದ ಬೇಕಾಗಿದೆ" (ಸ್ಕೂಲ್ ಮಾಸ್ಟರ್)—ಎಂಬಂತೆ

ಹೇದೇವ ಪ್ರಾಣೇಶ ಪರಮೇಶನೇ |
ಜಯ ದೇವನೇ | ಭಯನೀಗಿಸೂ ‖
ದಯ ತೋರಿ ಪರಿ ಪಾಲಿಸೂ ‖ ಪ ‖
ಜೀವಾಂತ ರಂಗ ಕುದಿಯುತ್ತಿದೆ |
ಭವರೋಗ ಜ್ವಾಲೆ ದಹಿಸುತ್ತಿದೆ ‖
ದೆವಾದಿ ದೇವಾ ಕೊಡು ಜ್ಞಾನವಾ |
ನವ ಶಕ್ತಿದಾಯಕ ದಯ ಪಾಲಿಸೂ ‖
ಚಿರ ಶಾಂತಿಯಾ | ಪರಂ ಜ್ಯೋತಿಯಾ |
ಗುರು ನೀಡಿ ಪರಿಪಾಲಿಸೂ ‖ ೧ ‖
ಪಾಪಾನು ತಾಪಾ ಒಂದಾಗಿಹೇ |
ಪರಿಣಾಮ ಮರಿಯದೆ ಬಳಲುತ್ತಿಹೇ ‖
ಪ್ರಾಣೇಶ ಹರಿಸೈ ಅಜ್ಞಾನವಾ |
ಪರಮೇಶ ವರ ತಾಳ್ಮದಾ ಹನುಮನೇ |
ಚಿರಶಾಂತಿಯಾ | ಪರಂಜ್ಯೋತಿಯಾ |
ಗುರುನೀಡಿ ಪರಿಪಾಲಿಸೂ ‖ ೨ ‖

೧೦೦. " ಸಿಂಗಾರೀ, ಬಂಗಾರೀ .... " (ಮಮತೆಯ ಬಂಧನ) — ಎಂಬಂತೆ

ಶ್ರೀರಾಮ । ರಘುರಾಮ । ಓಡಿ ಬಾರೋ ಇಂದೇ ।
ಜಯರಾಮ ಎನ್ನ ತಂದೆ ॥ ಹೇದೇವ ಶರಣೆಂದೇ ॥ ಪ ॥
ಗುಣಧಾಮ । ಬಲಭೀಮ । ಬೇಡಿ ಕೊಂಬೆ ಗುರುವೇ ।
ನಾ ಹಾಡಿ ಹಾಡಿ ನಲಿವೇ । ಕಾಯೋ ಓ ಪ್ರಭುವೇ ॥ ಅ. ಪ ॥
ತೋರುವೆ ನಿತ್ಯಾ ಅಚಲ ಭಕ್ತಿಯನ್ನೂ ।
ತೋರಿಸಯ್ಯ ದೇವಾ ನಿನ್ನ ಪಾದವನ್ನೂ ॥
ನೀ ಸಂತೋಷ । ಸಂಕೇತ । ತೋರಿ ಬಾರಯ್ಯ ॥ ೧ ॥
ಆಲಿಸು ತಂದೇ ಎನ್ನ ಮನದ ನೋವಾ ।
ಪಾಲಿಸಯ್ಯ ಸ್ವಾಮೀ ನೀಡಿ ಜ್ಞಾನ ಭಾವಾ ॥
ದೂರಾಗೀ ನಿನ್ನಿಂದಾ ನಾ ಬಾಳಲಾರೆ ದೇವಾ ॥ ೨ ॥
ಅವರಿಸಯ್ಯ ಎನ್ನ ಮನವ ನೀನೂ ।
ಆಲಿಸಯ್ಯ ಸ್ವಾಮೀ ಕೂಗುವೇನು ನಾನೂ ॥
ಆನಂದ । ನೀ ನೀಡೂ ಓ ತಾಳ್ಯದ್ಹನುಮ ನಾಥಾ ॥ ೩ ॥

೧೦೧. " ನಿಮ್ಮ ಮುದ್ದಿನ ಕಂದ ನಾವು " (ತೂಗು ದೀಪ) — ಎಂಬಂತೆ

ಓಡಿ ಬನ್ನಿರಿ ಭಕ್ತರೆಲ್ಲಾ ಪೂಜಿಸಿರಿ ಗುರುವನ್ನು ।
ಬೇಡಿ ಭಕ್ತಿಯ ಭಾವವನ್ನು ನೀಗಿರೀ ಭವವನ್ನು ॥ ಪ ॥
ನೋಡೀ ಹನುಮಾ ಪಾದಾ । ಹಾಡಿ ಅವನಾ ನಾಮಾ ।
ಮಾಡಿ ಅವನಾ ಧ್ಯಾನಾ । ಬೇಡಿ ಪರಮಾ ಜ್ಞಾನಾ ॥
ದೂಡಿ ನಿಮ್ಮ ಮನದ ನೋವಾ । ತೋರಿ ಭಕ್ತಿ ಭಾವಾ ।
ಪಡೆಯ ಬನ್ನಿ ಶಾಂತಿ ಫಲವಾ । ಹರಿಸಿ ನಿಮ್ಮ ಭಯವಾ ॥ ಅ. ಪ ॥

ಅವನ ನಾಮವೆ ನಿಮ್ಮ ಜಪವು । ಅವನ ಧ್ಯಾನವೆ ನಿಮ್ಮ ತಪವು ।
ಅವನ ಪ್ರೇಮವೆ ನಿಮ್ಮ ಉಸಿರು । ಅವನ ಕರುಣೆಯೆ ಬಾಳೆ ಹಸಿರು ॥
ದೂಡಿ ನಿಮ್ಮ ಮನದ ನೋವಾ । ತೋರಿ ಭಕ್ತಿಭಾವಾ ।
ಪಡೆಯ ಬನ್ನಿ ಶಾಂತಿ ಫಲವಾ । ಹರಿಸಿನಿಮ್ಮ ಭಯವಾ ॥ ೧ ॥

ತಾಳಿ ಬಾಳುವ ಜನರ ಒಲಿವ । ತಾಪ ನೀಗುವ ಅವನ ನಮಿಸಿ ।
ತಾಯಿ ತಂದೆಯ ರೂಪ ನಾದ । ತಾಳ್ಯದ್ಹನುಮನ ನೀವು ಒಲಿಸಿ ॥
ದೂಡಿ ನಿಮ್ಮ ಮನದ ನೋವಾ । ತೋರಿ ಭಕ್ತಿಭಾವಾ ।
ಪಡೆಯ ಬನ್ನಿ ಶಾಂತಿ ಫಲವಾ । ಹರಿಸಿ ನಿಮ್ಮ ಭಯವಾ ॥ ೨ ॥

೧೦೨. “ ಕಹಿದೀಪ್ ಜಲೆ ಕಹಿದಿಲ್ ” (ಬೀಸ್ ಸಾಲ್ ಬಾದ್) ಎಂಬಂತೆ

ಜಯ ಮಾರುತೀ ಗುರು ಬಾ |
ಭಯ ನೀಗಿಪ ದೇವನೆ, ಕರುಣಾಳೂ .... ||
ದಯ ತೋರುತಾ ಗುರು ಬಾ || ಪ ||

ಬಿರುಗಾಳಿಯು ಬೀಸುತ ಲಿಹುದೈ |
ಬಡ ಬಾಳಿನ ನಾವೆಯು ಸಾ .... ಗದೂ ||
ಭವ ಭೀತಿಯ ನೀ ಹರಿಸೈ .... |
ಭಯ ನೀಗಿ ಪ ದೇವನೆ ಕರುಣಾಳೂ .... || ೧ ||

ಎನ್ನ ಹೃದಯದ ತಾಪವ ನೀಗೈ |
ಘನ ಪ್ರೇಮದ ಐಸಿರಿ ನೀ .... ಡೈ .... |
ಚಿರ ಜ್ಞಾನದಾ ನಿಧಿಬಾ || ದಯ ತೋರುತಾ ಗುರುಬಾ |
ಭಯ ನೀಗಿಪ ದೇವನೆ ಕರುಣಾಳೂ .... || ೨ ||

ಇಹ ಲೋಕದ ಮಾಯೆಯ ಹರಿಸೈ |
ಬಹು ಪಾಪದ ಭೀತಿಯ ನೀ .... ಗೈ ||
ಗುರುತಾಳ್ಯದ್ಧನುಮಾ....ಬಾ || ದಯ ತೋರುತಾ ಗುರುಬಾ |
ಭಯ ನೀಗಿಪ ದೇವನೆ ಕರುಣಾಳೂ .... || ೩ ||

೧೦೩. “ ಜ್ಯೋತಿ ಕಳಶ ಝಲಕೇ ” (ಬಾಬೀಕಿ ಚೂಡಿಯಾ) — ಎಂಬಂತೆ

ಜ್ಯೋತಿ ಬೆಳಗುತಿಹುದು |
ಮನೋ ಪ್ರಕಾಶ ಮಾಡುತಲಿಹುದು | ಹನುಮನ ರೂಪದಲೀ .... || ಪ ||
ನಿಜಭಕ್ತರ ತನುಮನದಲಿ ಮುದದಲಿ |
ಸುಜನಾ....ಹೃದಯ ಮಂದಿರದಲ್ಲೀ....|| ಅಂಜನಿ ಸುತವರನಾ....|| ೧ ||
ಕುಂಕುಮ ಅಕ್ಷಿನ ಮಂತ್ರಾಕ್ಷತೆಯು | ಹೂವು ಪತ್ರೆಗಳ ಭೂಷಿತನಾದ ||
ಮಂಗಳಕರ ಪ್ರಭುವಾ .... || ೨ ||
ಘೋರ ಘೋರ ಇರುಳೂಮನದಾಶಾ |
ಅಜ್ಞಾನ ನಿಶ ಹರಾ ಪ್ರಕಾಶ.... || ವರಹನುಮಾ ಕೃಪೆಯಾ || ೩ ||
ನೇಮಾ ಎಂಬ ಹಣತೆಯ ಒಳಗೆ ರಾಮಾ ಭಕುತೀ ಆಜ್ಯದಿ ಮುಳುಗಿ |
ಹನುಮಾ ಬತ್ತಿಯುತಾ .... || ೪ ||
ತಾರಕ ನಾಮಾ ಬೆಳಕಾ ನೀಡೀ |
ಕಾರಿರುಳನು ತಾ| ನೀಗುವ ನೋಡೀ || ತಾಳ್ಯದ ಹನುಮವರಾ.... || ೫ ||

೧೪. "ಇಲ್ಲೂ ಇರುವೆ, ಅಲ್ಲೂ ಇರುವೆ" (ಬದುಕುವ ದಾರಿ)—ಎಂಬಂತೆ.

ಇಲ್ಲೂ ಹನುಮ । ಅಲ್ಲೂ ಹನುಮಾ ।
ಎಲ್ಲಾ ಕಡೆಯೂ ಇರುತಿಹನೂ । ಇರುತಿಹನೂ ॥ ಪ ॥
ನೀತಿಯ ಮಾರ್ಗದೀ ಸಿಲುಕುವನೂ । ಪ್ರೀತಿಯ ಹೃದಯಕೆ ನಿಲುಕುವನೂ ।
ಭಕ್ತಿಯ ಕಣ್ಣಿಗೆ ಕಾಣಿಸುವಾ । ಕಾಣಿಸುವಾ ॥ ೧ ॥
ಭಕುತಿಯ ಲೋಕದಾ ಹೊಳಪಾಗೀ । ಮುಕುತಿಯ ದ್ವಾರದಾ ಬೆಳಕಾಗೀ ।
ನಿಕರದಾ ಹೊಳೆಯಾಗೀ । ಕನಿಕರದಾ ಹೊಳೆಯಾಗೀ ॥
ಕುಳಿತಿಹ ಮನುಜನ ಮನದಲ್ಲಿ ॥ ೨ ॥
ದಾಸರವೃಂದಕೇ ಪ್ರಭುವಾಗೀ । ಶರಣರ ಪಂಥಕೇ ವಿಭುವಾಗೀ ।
ಇರುತಿಹ ತಾಳ್ಯದ ಹನುಮಂತ । ಇರುತಿಹ ತಾಳ್ಯದ ಹನುಮಂತ ॥
ಸೇವಿಸು ಅವನ ಓ ಮನುಜ ॥ ೩ ॥

೧೫. ["ಪತಿವ್ರತೆ ಕುರುಡಳೂ ಇತರರ ಅಂದಕೆ" (ಸಂತ ತುಕಾರಾಂ)-ಎಂಬಂತೆ]

ಸುರನುತ ಚಿನ್ಮಯಾ । ಹನುಮನೆ ವಂದಿಪೆ
ನಿರತವು ನಿನ್ನಯ ನಾಮವ ಸ್ತುತಿಪೇ ॥ ಪ ॥
ಎನ್ನ ಹೃದಯದಲ್ಲಿ । ನಿನ್ನ ರೂಪು ತುಂಬೀ ।
ಧನ್ಯನೆನಿಸು ಎನ್ನ ನೀನು । ಬಂದೆ ನಿನ್ನ ನಂಬೀ ॥ ೧ ॥
ಎನ್ನ ಮನದಿ ನೀಡೂ । ಅಚಲಭಕ್ತಿಭಾವಾ ।
ಜನ್ಮಪಾವನಮಾಡು । ಅಮರತೇಜ ದೇವಾ ॥ ೨ ॥
ಸತ್ಯಮಾರ್ಗದಲ್ಲಿ । ಸತತ ಎನ್ನ ನಡೆಸೂ ।
ನಿತ್ಯ ತೃಪ್ತಿಯ ನೀಡೀ । ಸಲಹು ತಾಳ್ಯದ್ಹನುಮಾ ॥ ೩ ॥

೧೬. [" ಅಮ್ಮಾ, ಕಂದಾನಾನಮ್ಮ" (ಮಮತೆಯ ಬಂಧನ)-ಎಂಬಂತೆ.]

ತಂದೇ ಬಾರೋ ಹನುಮಯ್ಯ । ಕಾಣದೆ ನಿನ್ನನ್ನೂ.... ।
ನೊಂದೆ ನಾನಯ್ಯಾ ॥ ದೂರಾ ನಿನ್ನಿಂದ ನಾ ಇರಲಾರೆನಯ್ಯಾ ॥ ಪ ॥
ಮಾಡಿದ ತಪ್ಪನ್ನೂ । ಮನ್ನಿಸಿ ಬಾರಯ್ಯ.... ।
ಬೇಡುವೆ ನಾನು, ಓಡುತ ಬಂದು ದಯವಾ ತೋರಯ್ಯ ॥
ನುಡಿಸು ಸತ್ಯಮಾತಾ ನೀ ಬಾರಯ್ಯ ॥ ೧ ॥
ನೀತಿಯ ಬೆಳಕನ್ನೂ । ತೋರುತ ನೀ ಬಂದೂ....।
ಭೀತಿಯ ಹರಿಸೂ, ದಾರಿಯ ತೋರೂ ದೇವನೆ ನೀ ನಿಂದು ॥
ಮತಿಯಾ ನೀ ನೀಡುತ ಸಲಹೂ ಓ ಬಂಧು ॥ ೨ ॥
ಬೇಡುವೆ ನಾ ದೇವಾ । ನೀಗಿಸು ನೀ ನೋವಾ ।
ಬಾಡುತಲಿರುವಾ । ಭಕ್ತಿಯಹೂವಾ । ಅರಳಿಸು ಸಂಜೀವಾ ॥
ಧೃಢದ ಮನವಾ ಇರಿಸು ತಾಳ್ಯದ್ಹನುಮಾ ॥ ೩ ॥

೧೦೭. " ಬಹಾರೋ ಫೂಲ್ ಬರಸಾವೊ " (ಸೂರಜ್) ಎಂಬಂತೆ.

ಬಂದಾನೋ ಹನುಮ ಬಂದಾನೋ । ಎನ್ನಾ ಕನಸಲ್ಲಿ ಬಂದಾನೋ ।
ಎನ್ನಾ ಕನಸಲ್ಲಿ ಬಂದಾನೋ ॥ ಪ ॥

ತಂದಾನೋ ಸಿರಿಯ ತಂದಾನೋ । ಅನುಪಮ ಭಾಗ್ಯ ತಂದಾನೋ ।
ನನ್ನಾ । ಗುರು ಭಾಗ್ಯ ತಂದಾನೋ ॥ ಅ. ಪ. ॥

ಅಜ್ಞಾನಾ ಹರಸು ಜ್ಞಾನಾವರ । ಗುರು ತಾ ಎನ್ನ ಪೊರೆದಾನೋ ।
ಅನಾದೀ ಗುರು ಅನಂತಾವರ । ಪ್ರಭು ತಾ ಭವವ ಹರಿದಾನೋ ॥
ನಿಂದಾನೋ ದೇವ ನಿಂದಾನೋ । ಎನ್ನ ಕಣ್ಮುಂದೆ ನಿಂದಾನೋ ॥
ಎನ್ನಾ। ಕಣ್ಮುಂದೆ ನಿಂದಾನೋ ॥ ೧ ॥

ತಪ್ಪನ್ನೂ ಹರಿಸಿ ಒಪ್ಪಾಗೀ ನಡೆಸಿ । ತಾ ಮನವ ಒಲಿವೇನೋ ।
ಕಲ್ಲಾಗೀ ತಾನೆಲ್ಲೆಲ್ಲೂ ನಿಂದು । ಮುದಾ ನೀಡಿ ನಲಿವೇನೋ ॥
ಎಂದಾನೋ ದೇವ ಎಂದಾನೋ । ಜನರ ಪೊರೆವೇನು ಎಂದಾನೋ ॥
ಜನರಾ ಪೊರೆವೇನು ಎಂದಾನೋ ॥ ೨ ॥

ಶ್ರೀರಾಮಾ ರಾಮರಾಮಾ ಎಂದು । ಗುರುತಾ ಭಜಿಸಿ ಕುಣಿದಾನೋ ।
ಶ್ರೀರಾಮನಾಮ ಧ್ಯಾನಾ ಮಾಡಿ । ಪಡೆ ನೀ ಸುಖವ ಎಂದಾನೋ ॥
ತಾಳ್ಯಾದ ಹನುಮ ಹೊರಟಾನೋ । ಅಭಯ ತಾ ನೀಡಿ ಹೊರಟಾನೋ ॥
ಅಭಯ । ತಾ ನೀಡಿ ಹೊರಟಾನೋ ॥ ೩ ॥

೧೦೮. " ದೇಖೋ ಮೆರಾ ದಿಲ್ ಮಚಲ್‌ಗಯಾ " (ಸೂರಜ್)— ಎಂಬಂತೆ.

ಎನ್ನ ಪೂಜೆಯನು ನೋಡೋ ದೇವಾ ।
ನಿನ್ನ ಪಾದವನು ತೋರೋ ದೇವಾ ॥
ತೋರೋ ದೇವಾ । ಕರುಣೆಯಾ ॥ ಪ ॥

ಆತ್ಮದಲೀ ನೀನಿರೆ ಪ್ರಭುವೆ । ಹೃದಯವೆ ತಾ ಮಂದಿರವೆನುವೆ ॥
ಮಾತುಗಳೀ ಸ್ತೋತ್ರವು ನಿನಗೆ ॥ ಪ್ರಭೂ ಮಾರುತೀ । ಪ್ರಭೂ ಮಾರುತೀ ॥ ೧ ॥

ಭಕ್ತಿಯು ತಾ ಹೂಗಳು ನಿನಗೆ । ಕಾಲ್ನಡಿಗೇ ಪ್ರದಕ್ಷಿಣೆಯು ।
ಕಣ್ಣೀರಭಿಷೇಕವು ನಿನಗೆ ॥ ಪ್ರಭೂ ಮಾರುತೀ । ಪ್ರಭೂ ಮಾರುತೀ ॥ ೨ ॥

ಕರ್ಮವು ನೇವೇದ್ಯವು ನಿನಗೆ । ಮನ್ಮನಭಾವವೆ ಆರತಿಯು ॥
ಚಿನ್ಮಯನೇ ತಾಳ್ಯದ ಹನುಮಾ ॥ ಎನ್ನ ಪಾಲಿಸೂ । ಎನ್ನ ಪಾಲಿಸೂ ॥ ೩ ॥

೧೦೯. ಆರತಿ ಹಾಡು. ("ಶ್ರೀ ನಾರಸಿಂಹನೇ")—ಎಂಬಂತೆ

ಶ್ರೀ ನಾರಣಪ್ಪನೇ | ಶ್ರೀ ಶದಾಸನೇ ||
ಆರತೀಯು ಬೆಳಗಿ ನಾನು ಚರಣಕ್ಕೆರಗುವೇ || ಪ ||

ಪಂಡಿತೋತ್ತಮಾ | ಪಾಮರೋದ್ಧಾರಾ |
ಕುಂದಗೋಳ ಸ್ವಾಮಿ ನಿನ್ನ ಚರಣಕ್ಕಾರತೀ || ೧ ||

ನಾಮಯಜ್ಞವಾ | ಮಾಡಿ ಮೆರೆದನೇ |
ಪ್ರೇಮದಿಂದ ಎಮ್ಮ ಪೊರೆವನಿನಗೆ ಆರತೀ || ೨ ||

ತಾಪಹಾರನೇ | ಚಿನ್ಮಯಾತ್ಮನೇ |
ತಾಳ್ಯಧ್ಹನುಮದಾಸ ನಿನ್ನ ಹೃದಯಕಾರತೀ || ೩ ||

## ಜೋ ಜೋ ಹಾಡು

೧೧೦. "ಆದಿದೇವ, ಆದಿಮೂಲ, ಆದಿಬ್ರಹ್ಮ ಜೋಜೋ" (ಸತಿಅನಸೂಯ) ಎಂಬಂತೆ

ಪ್ರಾಣನಾಥ | ರಾಮದೂತ | ಚೈತನ್ಯ ಜೋ ಜೋ |
ಹನುಮರೂಪ | ಮಹಾದೇವ | ರಾಮದಾಸ ಜೋ ಜೋ || ಪ ||

ರಾಮ ರಾಮ ಎನುತ ತಣಿದು | ದೃಷ್ಟಿ ಬಡಿಯುವಂತೆ ಭಜಿಸಿ |
ಪೇಮದಿಂದ ತೊಟ್ಟಿಲಲಿ | ನಲಿದ ದೇವನೆ ಜೋ ಜೋ || ೧ ||

ತಾಯ ಮಾತು ಉಳಿಸಲೆಂದು | ತಿರುಗಿ ಜನ್ಮ ಪಡೆದು ಬಂದ |
ಜೀಯ ರಾಮ ದಾಸರೂಪನೆ | ಗೀತಾ ಪುತ್ರನೆ ಜೋ ಜೋ || ೨ ||

ಗುರುಬ್ರಹ್ಮ ಚೈತನ್ಯ | ಚಿರಶಾಂತಾ ಜಗಮಾನ್ಯಾ |
ವರತಾಳ್ಯದ್ಹನುಮಂತನೇ ಸಕಲಾರ್ತಿ ಹರಾ ಜೋ ಜೋ || ೩ ||

——:0:——

ಅಲ್ಲಿಹನು ಇಲ್ಲಿಹನು ಎಲ್ಲಿಹನು ಎನಬೇಡಾ |
ಕಲ್ಲಿನಲಿ ಮಣ್ಣಿನಲಿ ಇಲ್ಲವೆಂದೆನ ಬೇಡ ||
ಬಲ್ಲಿದರು ಬಡವರು ಎಲ್ಲರಿಗೂ ದೇವನವ |
ಎಲ್ಲೆಲ್ಲು ಇರುತಿಹನು ಬಲ್ಲ ತಾಳ್ಯದ ಹನುಮ ||

|| ಓಂ ಶಾಂತಿಃ ಶಾಂತಿಃ ಶಾಂತಿಃ ||


AKSHARA GRANTHALAYA
ACC.NO. 111298

# ಮಿತ್ರನ ಮಾತೊಂದು

ಸೇವಾ ಧುರೀಣ ಭಗವಾನ್ ಮಾರುತಿಯ ಅನನ್ಯ ಭಕ್ತನಾದ ನಸ ಜೀವದಗೆಳೆಯ ತಾ. ಶ್ರೀ. ನಾಗರಾಜರಾಯ ಹುಬ್ಬಳ್ಳಿಯಲ್ಲಿ ರೈಲ್ವೆಸ್ಟೇರ್ಸಸೂಪರಿಂಟೆಂಡೆಂಟ್‌ರಾಗಿರುವ ಶ್ರೀ ಟಿ. ಎ. ಶ್ರೀನಿವಾಸರಾಯರ ಪುತ್ರ. ಬಾಲ್ಯದಿಂದಲೇ ಸಾಹಿತ್ಯಪ್ರೇಮಿಯಾಗಿ, ನಾನಾ ರೂಪಗಳಲ್ಲಿ ಸರಸ್ವತಿಯ ಸೇವೆಯಲ್ಲಿ ತೊಡಗಿ ಈಗ್ಗೆ ಆರು ವರ್ಷಗಳ ಕೆಳಗೆ 'ಶ್ರೀ ಹನುಮಾರ್ಗೀತೆ'ಯ ಮೊದಲನೆಯ ಭಾಗವನ್ನು ರಚಿಸಿದಾಗ ಆ ಭಕ್ತಿ ಸುಧೆಯನ್ನು ಸವಿದ ಭಕ್ತವೃಂದದ ಅನುಪಮ ಪ್ರೋತ್ಸಾಹವೇ ಶ್ರೀ ಹನುಮಾರ್ ಮತ್ತಿತರ ಭಕ್ತಿಗೀತೆಗಳ ಈ ಎರಡನೆಯ ಪುಷ್ಪವು ಅರಳಲು ಪ್ರೇರಕವಾಯಿತು.

ಈ ಸತ್ಕಾರ್ಯದಲ್ಲಿ ವಿಶೇಷ ರೀತಿಯಲ್ಲಿ ಪ್ರೋತ್ಸಾಹ ನೀಡಿ ಸ್ಫೂರ್ತಿಯನ್ನೀಯುತ್ತಿದ್ದ ಭಗವದ್ಭಕ್ತರಾದ ದಿ|| ಶ್ರೀ ಟಿ. ಎ. ಸುಬ್ಬರಾಯರಿಗೆ ಈ ದೈವಿಕ ಪುಸ್ತಕವನ್ನು ಅರ್ಪಿಸಿರುವುದು ಯಥೋಚಿತವಾಗಿದೆ.

ಈ ಭಕ್ತಿ ಸಾಹಿತ್ಯಕ್ಕೆ, ಶ್ರೀಮತಿಯರಾದ ಸೀತಮ್ಮನಾರಾಯಣರಾವ್, ಸಂಜೀವಮ್ಮಶ್ರೀನಿವಾಸಮೂರ್ತಿ, ಕುಮಾರಿ ಎಸ್. ಎನ್. ಲಕ್ಷ್ಮಿ, ಕುಮಾರಿ ಬಿ. ಎಸ್. ರಾಧಾ, ಚಿ|| ಶ್ರೀನಿವಾಸ್, ಶ್ರೀ ಎಸ್. ವೆಂಕಟರಾಯರ ಕುಟುಂಬ ವರ್ಗದವರು ತಮ್ಮ ಕಂಠ ಮಾಧುರ್ಯವನ್ನು ಸೇರಿಸಿ ಗೀತೆಗಳನ್ನು ಮತ್ತಷ್ಟು ಶ್ರೀಮಂತಗೊಳಿಸಿದ್ದಾರೆ. ಸೇವಾಧ್ಯೇಯವುಳ್ಳ ಶ್ರೀ ಹನುಮಾರ್ ಸಂಘವು ತನ್ನ ಭಕ್ತಿಸಾಹಿತ್ಯ ಮಾಲೆಯ ಮೂರನೆಯ ಕುಸುಮವಾಗಿ ಈ ಕೃತಿಯನ್ನು ಜನತೆಗೆ ನೀಡಿದೆ.

ಶಾಸ್ತ್ರೀಯ ಸಂಗೀತದ ಮಟ್ಟನಲ್ಲೇ ಅಲ್ಲದೆ, ಇಂಪಾದ ಚಲಚ್ಚಿತ್ರಗೀತೆಗಳ ರಾಗಕ್ಕೆ ಭಕ್ತಿರಸದ ಜೇನನ್ನು ತುಂಬಿರುವ ಈ ಭಗವಾನ್ ನಾಮಾಮೃತವನ್ನು ಸಕಲರೂ ಪಾನಮಾಡಿ ಪರಮಾತ್ಮನ ಕೃಪೆಗೆ ಪಾತ್ರರಾಗಲೆಂಬುದೇ ಲೇಖಕನ ಅಭೀಷ್ಟ.

ಹಿರಿಯ ಸಾಹಿತಿಗಳೂ, ಮೈಸೂರು ವಿಶ್ವವಿದ್ಯಾನಿಲಯದ ನಿವೃತ್ತ ಗ್ರಂಥಪಾಲಕರೂ ಆದ ಶ್ರೀ ತ. ಸು. ಶಾಮರಾಯರು, ಶನಿವಾರ, ೬-೮-೧೯೬೬ ರಂದು ನಡೆದ ಸಮಾರಂಭದಲ್ಲಿ ಈ ದಿವ್ಯ ಕೃತಿಯನ್ನು ಉದ್ಘಾಟಿಸಿದರು.

ನಾ. ನಾ. ರಾಯ.